ಪ್ರತಿಭಾ ಗ್ರಂಥಮಾಲೆ, ಧಾರವಾಡ. ಹತ್ತನೆ ವರುಷ (ಮೊದಲನೆಯ ಕಿರಣ)




ಕ್ರಾಂತಿ ಶಿರೋಮಣಿ

# ಭಗತಸಿಂಗ



ಲೇಖಕರು:

**ಶ್ರೀ. ಭಾ. ನೆಂ. ದೇಶಪಾಂಡೆ,** ಬಿ. ಎ. ( ಆನರ್ಸ್ )

ಮುದ್ರಕರು ಮತ್ತು ಪ್ರಕಾಶಕರು:

ಭಾಲಚಂದ್ರ ವೆಂಕಟೇಶ ಘಾಣೇಕರ,

ಪ್ರತಿಭಾ ಮುದ್ರಣ, ಭಗತಸಿಂಗ ಬೀದಿ, ಧಾರವಾಡ.

೧—೧—೧೯೫೩. ಬೆಲೆ: ೧—೦—೦

# ಸಂಪಾದಕರ ಮಾತು.

ಚಿರಸ್ಮರಣೀಯರಾದ ಕ್ರಾಂತಿಶಿರೋಮಣಿ ಭಗತಸಿಂಗರ ಜೀವನ ಚರಿತ್ರೆಯನ್ನು, ಭಗತಸಿಂಗ ಬೀದಿಯಲ್ಲಿರುವ ನಮ್ಮ ಮಾಲೆಯ ಪರವಾಗಿ ಪ್ರಕಟಿಸಲು ಅಭಿಮಾನವೆನಿಸುವದರಲ್ಲಿ ಸಂದೇಹವಿಲ್ಲ. ಇಂಥ ವೀರಪುತ್ರರ ಬಲಿದಾನದಿಂದಲೇ ಸ್ವಾತಂತ್ರ್ಯದ ದಿವ್ಯ ಜ್ಯೋತಿಯು ಬೆಳಗಿದ್ದು. ಇವರ ಅಪಾರ ತ್ಯಾಗದ ಚರಿತ್ರೆಯನ್ನರಿತುಕೊಳ್ಳುವದು ನಮ್ಮೆಲ್ಲರ ಕರ್ತವ್ಯವಾಗಿದೆ.

ಹಿಂದೆ ಸುಭಾಸ-ಬೀದಿಯಲ್ಲಿದ್ದಾಗ ನಮ್ಮ ಮಾಲೆಯ ಪರವಾಗಿ "ಸುಭಾಸ ಸೀಮೋಲ್ಲಂಘನ" ಮತ್ತು "ನೇತಾಜಿ" ಈ ಎರಡು ಪುಸ್ತಕಗಳನ್ನು ಪ್ರಕಟಿಸಿ ಕ್ರಾಂತಿವೀರ ಸುಭಾಸ ಭೋಸರ ಸಮಗ್ರ ಇತಿಹಾಸವನ್ನು ಜನತೆಯೆದುರು ಇಟ್ಟಿದ್ದೇವೆ. ಇಂಥ ಅಮೌಲ್ಯ ಕಾಣಿಕೆಗಳನ್ನು ಸಲ್ಲಿಸಿದ್ದಕ್ಕಾಗಿ ಅನೇಕ ಚಂದಾದಾರರು ತುಂಬ ಮೆಚ್ಚಿ ಅಭಿನಂದನಪರ ಪತ್ರಗಳನ್ನು ಬರೆದಿದ್ದಾರೆ. ಈ ಕ್ರಾಂತಿವೀರನ ಚರಿತ್ರೆಯಾದರೂ ನಮ್ಮ ಓದುಗರನ್ನು ಮೆಚ್ಚಿಸಬಹುದೆಂಬ ಭರವಸೆಯಿಂದ ಇದನ್ನು ಪ್ರಕಟಿಸುವ ಸಾಹಸ ಮಾಡಿದ್ದೇವೆ.

ಈ ಪುಸ್ತಕವನ್ನು ಸುಂದರವಾಗಿ ಬರೆದುಕೊಟ್ಟ ಅಥಣಿಯ ಶ್ರೀಯುತ ಭಾ. ವೆಂ. ದೇಶಪಾಂಡೆಯವರಿಗೆ ನಾವು ಕೃತಜ್ಞರಾಗಿದ್ದೇವೆ.

೧-೧-೧೯೫೩. ಭಾಲಚಂದ್ರ ಘಾಣೇಕರ.

# ಅರ್ಪಣೆ



ಇಪ್ಪತ್ತರ ಎಳೆ ಹರೆಯದಲ್ಲಿರುವಾಗಲೇ ೧೯೧೫ ರಲ್ಲಿ
ಯಾರು ಮಾತೃಭೂಮಿಯ ಅಡಿಯಲ್ಲಿ ಪ್ರಾಣ
ವನ್ನರ್ಪಿಸಿದರೋ ಮತ್ತು ಯಾರ ಜೀವನ
ಚರಿತ್ರೆಯನ್ನು ಭಗತ್‌ಸಿಂಗನು ಓದುಗರ
ಭಾವನೆಗಳು ಕದಡುವಂತೆ ಭಾವನೋ
ತ್ಕಟ ಶೈಲಿಯಲ್ಲಿ ಬರೆದಿದ್ದನೋ
ಆ ಸರದಾರ ಕರ್ತಾರ ಸಿಂಗರ
ಸ್ಫೂರ್ತಿದಾಯಕ ಸ್ಮೃತಿಗೆ.

# ಕೃತಜ್ಞತೆ.

ಭಗತ್‌ಸಿಂಗನ ಜೀವದ ಗೆಳೆಯರಲ್ಲೊಬ್ಬರಾದ ಶ್ರೀ. ಜಿತೇಂದ್ರನಾಥ ಸನ್ಯಾಲರು ಆಂಗ್ಲ ಭಾಷೆಯಲ್ಲಿ "The Life of Bhagat Singh" ಎಂಬ ಚರಿತ್ರೆಯನ್ನು ಬರೆದದ್ದರಿಂದಲೇ ಆ ಮಹಾನ್ ಕ್ರಾಂತಿಕಾರಿಯ ಜೀವನದ ಪ್ರಾಮಾಣಿಕ ಚಿತ್ರವು ನಮಗೆ ದೊರೆತಿದೆ. ಯಾವಾಗಲೂ ಗುಪ್ತಚಟುವಟಿಕೆಗಳಲ್ಲಿ ತೊಡಗಿದ್ದ ಕ್ರಾಂತಿಕಾರಿಗಳ ಜೀವನ ಚರಿತ್ರೆಯು ಜನತೆಗೆ ತಿಳಿಯುವುದು ತುಂಬಾ ಕಷ್ಟವಾಗುತ್ತದೆ. ಆದರೆ ಶ್ರೀ. ಸನ್ಯಾಲರ ಪುಸ್ತಕವು ಭಗತ್‌ಸಿಂಗನ ವಿಷಯದಲ್ಲಿ ಆ ಕೊರತೆಯನ್ನು ತುಂಬಿ ತೆಗೆದಿದೆ.

ಆ ಪುಸ್ತಕವನ್ನು ಬರೆದ ಅಪರಾಧಕ್ಕಾಗಿ ಶ್ರೀ. ಸನ್ಯಾಲರು ಎರಡು ವರ್ಷ ಕಠಿಣ ಸಜ ಅನುಭವಿಸಬೇಕಾಯಿತು. ಅಲ್ಲದೆ ಬ್ರಿಟಿಷ್ ಸರಕಾರವು ಆ ಪುಸ್ತಕವನ್ನು ಆಕ್ಷೇಪಾರ್ಹವೆಂದು ಕಡೆಗಣಿಸಿತು. ಇಂಥ ಕ್ರಾಂತಿ ವೀರನ ಜೀವನ ಚಿತ್ರವನ್ನು ಜನತೆಯ ಮುಂದೆ ಇಡುವುದು ಆವಶ್ಯಕವೆನಿಸಿದ್ದರಿಂದ ಶ್ರೀ. ಸನ್ಯಾಲರ ಪುಸ್ತಕದ ಆಧಾರದಿಂದ ಬರೆದ ಈ ಚರಿತ್ರೆಯನ್ನು ನಾನು ಕನ್ನಡ ವಾಚಕರಿಗೆ ಅರ್ಪಿಸುತ್ತಿದ್ದೇನೆ. ಒಂದೆರಡು ವ್ಯತ್ಯಾಸಗಳನ್ನು ಬಿಟ್ಟರೆ ಬಹುತರವಾಗಿ ಎಲ್ಲ ವಿಷಯಗಳಲ್ಲಿ ಶ್ರೀ. ಸನ್ಯಾಲರ ಪುಸ್ತಕವನ್ನೇ ಅನುಸರಿಸಿದ್ದೇನೆ. ಕೊನೆಯ ಎರಡು ಪ್ರಕರಣಗಳಂತೂ ಅವರ ಮೂಲ ಪ್ರಕರಣಗಳ ಯಥಾವತ್ತಾದ ಅನುವಾದವೇ ಆಗಿವೆ. ಈ ಚರಿತ್ರೆಯನ್ನು ವಾಚಕರಿಗೆ ಅರ್ಪಿಸುವಾಗ ಶ್ರೀ. ಸನ್ಯಾಲರಿಗೆ ನಾನು ಅನಂತ ಕೃತಜ್ಞತೆಗಳನ್ನು ಅರ್ಪಿಸದಿರಲಾರೆ.

—ಲೇಖಕ

# ಭಗತಸಿಂಗ.



## ಜೀವನದ ಕರ್ತವ್ಯ ನಿಶ್ಚಯ

ಭಾರತದ ಚರಿತ್ರೆಯು ತ್ಯಾಗದಿಂದ ರೂಪುಗೊಂಡಿದೆ. ಈ ಚರಿತ್ರೆಯ ವೃಕ್ಷವು ನೀರಿನಿಂದ ಬೆಳೆದಿಲ್ಲ. ಅನೇಕಾನೇಕ ವೀರರು ಸುರಿಸಿದ ರಕ್ತದಿಂದ ಬೆಳೆದಿದೆ. ಆಂಗ್ಲ ಆಧಿಪತ್ಯದ ವಿರುದ್ಧ ನಡೆದ ಸ್ವಾತಂತ್ರ್ಯ ಸಂಗ್ರಾಮದಲ್ಲಿಯೂ ಈ ವಿಷಯ ನಿದರ್ಶನಕ್ಕೆ ಬರುತ್ತದೆ. ಭಾರತ ಮಾತೆಯ ಮುಕ್ತಿಗಾಗಿ ಭಾರತೀಯರು ಪರಮಾವಧಿ ತ್ಯಾಗ ಮಾಡಿದ್ದನ್ನು ಇಲ್ಲಿ ನಾವು ಕಾಣುತ್ತೇವೆ. ಭಾರತದ ಬಂಧವಿಮೋಚನೆಗೆ ನಡೆದ ಈ ಹೋರಾಟದಲ್ಲಿ ಭಾರತೀಯ ಕ್ರಾಂತಿಕಾರಿಗಳಿಗೊಂದು ನಿರ್ದಿಷ್ಟ ಸ್ಥಾನವಿದೆ. ಅವರ ಉಜ್ವಲ ದೇಶಭಕ್ತಿಯು ಮತ್ತು ಮಾತೃಭೂಮಿಗಾಗಿ ಸರ್ವಸ್ವವನ್ನು ಅರ್ಪಿಸುವ ಬುದ್ಧಿಯು ಚಿರಂತನ ಸ್ಫೂರ್ತಿಸ್ಥಾನಗಳಾಗಿವೆ. ಯಶಸ್ಸಿನ ಆಶಾಕಿರಣವೂ ಕಾಣದಿದ್ದಾಗ ದೀಪದ ಮೇಲೆ ಪತಂಗವು ಬೀಳುವಂತೆ ಧ್ಯೇಯಕ್ಕಾಗಿ ಸಾವನ್ನಪ್ಪಿಕೊಳ್ಳುವ ಅವರ ಧ್ಯೇಯನಿಷ್ಠೆಯು ಆದರ್ಶವಾಗಿದೆ. ತಮ್ಮ ಬಲಿದಾನದಿಂದ ಸ್ಫೂರ್ತಿ ಪಡೆದು ಭಾರತಮಾತೆಯ ಬಂಧನಗಳನ್ನು ಕಡಿದೊಗೆಯಲು ಅಸಂಖ್ಯ ನರವೀರರು ಮುಂದೆ ಬರಬೇಕೆಂಬುದೇ ಅವರ ಜೀವನದ ಹೆಬ್ಬಯಕೆಯಾಗಿತ್ತು. ಕೈಯಲ್ಲಿ ಭಗವದ್ಗೀತೆಯನ್ನು ಹಿಡಿದುಕೊಂಡು ನಗೆ ಮೊಗದಿಂದ ಗಲ್ಲಿನ ವೇದಿಕೆಯನ್ನೇರಿದ ಅನೇಕ ಕ್ರಾಂತಿಕಾರಿಗಳು ತಮ್ಮ ಜೀವನ ಸಮರ್ಪಣದಿಂದ ಅನೇಕರ ಅಂತಃಕರಣದಲ್ಲಿ ದೇಶಭಕ್ತಿಯ ಜ್ಯೋತಿಯನ್ನು ಬೆಳಗಿ ತಮ್ಮ ಜೀವನದ ಹಿರಿಯ ಆಸೆಯನ್ನು ಸಾಧಿಸಿದ್ದಾರೆ.

ಇಂತಹ ಕ್ರಾಂತಿಕಾರಿಗಳ ಮುಕುಟಮಣಿಯಾದ ಸರದಾರ್ ಭಗತ್ ಸಿಂಗನು ಇಸ್ವಿ ಸನ್ ೧೯೦೭–೮ ರ ಸಮಯಕ್ಕೆ ಒಂದು ದೇಶಭಕ್ತ ಮನೆತನ

ದಲ್ಲಿ ಹುಟ್ಟಿದನು. ಅವನ ತಂದೆ ಸ|| ಕಿಸನ್‌ಸಿಂಗರೂ, ಅವನ ದೊಡ್ಡಪ್ಪನೂ ದೇಶದ ರಾಜಕೀಯ ಚಟುವಟಿಕೆಗಳಲ್ಲಿ ಭಾಗ ವಹಿಸುತ್ತಿದ್ದರು. ಆ ಕಾಲದ ಪಂಜಾಬಿನ ಓರ್ವ ಕಾರ್ಯಕರ್ತರಾದ ಶ್ರೀ. ಸೂಫೀ ಅಂಬಾಪ್ರಸಾದ್ ಅವರು ಅವರ ಮನೆಗೆ ಆಗಾಗ್ಗೆ ಬರುತ್ತಿದ್ದರು. ಇವೆಲ್ಲ ಸಂಸ್ಕಾರಗಳಿಂದಾಗಿ ಭಗತ್‌ಸಿಂಗನು ಹುಟ್ಟಿದಾಗಲೇ ಅವನ ಮನಸ್ಸಿನಲ್ಲಿ ದೇಶಭಕ್ತಿಯ ಭಾವನೆಯ ಅಂಕುರಾರ್ಪಣೆಯಾಗಿತ್ತು. ಮತ್ತು ವಯಸ್ಸಿನೊಡನೆ ಅದೂ ಪೋಷಣೆ ಹೊಂದಿ ಬೆಳೆಯುತ್ತಿತ್ತು. ಸನಾತನಿಗಳಾದ ಅವನ ತಂದೆ ಆರ್ಯಸಮಾಜದ ಒಂದು ಶಾಲೆಯಲ್ಲಿ ಅವನ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮಾಡಿಸಿದರು. ಹೈಸ್ಕೂಲ್ ವಿದ್ಯಾಭ್ಯಾಸ ಮುಗಿದ ನಂತರ ಅವನನ್ನು ಲಾಹೋರಿನ ಡಿ ಎ ವಿ. ಕಾಲೇಜಿಗೆ ಸೇರಿಸಲಾಯಿತು. ಮುಂದೆ ಅವನು ಪಂಜಾಬ್ ಕೇಸರಿ ಲಾಲಾ ಲಜಪತರಾಯರು ಆರಂಭಿಸಿದ ರಾಷ್ಟ್ರೀಯ ಮಹಾವಿದ್ಯಾಲಯಕ್ಕೆ ಸೇರಿದನು. ತನ್ನ ಬಾಲ್ಯವನ್ನು ಕಳೆದು ಯುವಾವಸ್ಥೆಯಲ್ಲಿ ಕಾಲಿಡುತ್ತಿದ್ದ ಭಗತ್‌ಸಿಂಗನ ಅಂತಃಕರಣದಲ್ಲಿಯ ದೇಶಭಕ್ತಿಯ ಬೀಜವೂ ಈಗ ಅಂಕುರಿಸಿ ಬೆಳೆದು ಹೆಮ್ಮರವಾಗತೊಡಗಿತ್ತು. ಪಾರತಂತ್ರ್ಯ ಪಂಕದಲ್ಲಿ ಸಿಲುಕಿ ಗೋಳಿಡುತ್ತಿದ್ದ ಮಾತೆಯ ಕೂಗು ಸಹೃದಯನಾದ ಅವನಿಗೆ ಕೇಳಿಸದಿರಲಿಲ್ಲ. ಜಿಜ್ಞಾಸುವಾದ ಅವನು ತನ್ನ ದೇಶಬಾಂಧವರ ಸ್ಥಿತಿಗತಿಗಳನ್ನು ಅರಿಯಲು ಪ್ರಯತ್ನಪಟ್ಟನು. ಹೀನದೀನವಾದ ಜನತೆಯ ಕಂಗಾಲಾವಸ್ಥೆಯನ್ನು ಕಂಡು ಅವನ ಹೃದಯವು ವ್ಯಥೆಪಟ್ಟಿತು. ಮಾತೆಯ ಮುಕ್ತಿಗೆ ಉಪಾಯವಿಲ್ಲವೇ ? ಎಂಬೊಂದು ಚಿಂತೆ ಅವನನ್ನು ಬಲವಾಗಿ ಆವರಿಸಿತು. ವಿಚಾರವಂತನಾದ ಅವನು ತನ್ನ ಕರ್ತವ್ಯವನ್ನರಿತುಕೊಳ್ಳಲುದ್ಯುಕ್ತನಾದನು. ಬುದ್ಧಿವಂತನಾದ ಭಗತ್‌ಸಿಂಗನು ಚರಿತ್ರೆಯ ಅಭ್ಯಾಸವನ್ನು ಮಾಡಿ ಭಾರತವನ್ನು ಭಾಗ್ಯಶಾಲಿಯನ್ನಾಗಿ ಮಾಡಿದ ಅಂಶಗಳನ್ನೂ ಮಾತೆಯನ್ನು ಅಧೋಗತಿಗಿಳಿಸಿದ ಕಾರಣಗಳನ್ನೂ ತಿಳಿದುಕೊಳ್ಳಬೇಕೆಂದು ನಿಶ್ಚಯಿಸಿದನು. ಪಾರತಂತ್ರ್ಯದಿಂದ ಸ್ವಾತಂತ್ರ್ಯದ ಕಡೆಗೆ, ಅಧೋಗತಿಯಿಂದ ಉನ್ನತಿಯ ಕಡೆಗೆ, ಕಗ್ಗತ್ತಲೆಯೊಳಗಿಂದ ಪ್ರಕಾಶದ ಕಡೆಗೆ ಒಯ್ಯುವ ಮಾರ್ಗವನ್ನು ಅವನು ಶೋಧಿಸಲು ತೊಡಗಿದನು. ತನ್ನಂತೆಯೇ ಬೇರೆ ರಾಷ್ಟ್ರಗಳು ಪರದಾಸ್ಯದಲ್ಲಿ ಸಿಲುಕಿದಾಗ ಬಂಧವಿಮೋಚನೆಗಾಗಿ ಮಾಡಿದ ಮಹಾ ಪ್ರಯತ್ನಗಳ ಚರಿತ್ರೆ

ಯನ್ನು ಸೂಕ್ಷ್ಮವಾಗಿ ಅವಲೋಕಿಸಬೇಕೆಂದು ಅವನು ನಿರ್ಧಾರಮಾಡಿದನು. ಭಗತ್‌ಸಿಂಗನ ಕಾಲೇಜ ಜೀವನವೆಂದರೆ ಈ ಚರಿತ್ರೆಯ ಅಭ್ಯಾಸದ ಅವಧಿ, ಮಾತೆಯ ಮುಕ್ತಿಯ ಮಾರ್ಗಪರಿಶೋಧನೆಯ ಸಮಯ ಹಾಗೂ ಅವನ ಸ್ವಂತ ಜೀವನದ ಕರ್ತವ್ಯ ನಿಶ್ಚಯದ ಕಾಲವಾಯಿತು.

ಭಗತ್‌ಸಿಂಗನು ೧೯೨೧ ರ ಅಸಹಕಾರ ಆಂದೋಳನವನ್ನು ಅವಲೋಕಿಸಿದ್ದನು. ೧೯೧೭ ರಲ್ಲಾದ ರಶಿಯನ್ ರಾಜ್ಯಕ್ರಾಂತಿಯ ಚರಿತ್ರೆಯನ್ನು ಓದಿದ್ದನು. ಅವನು ಲಾಹೋರಿನಲ್ಲಿದ್ದಾಗ ಒಬ್ಬಿಬ್ಬ ಪ್ರಸಿದ್ಧ ಕ್ರಾಂತಿಕಾರಿಗಳ ಸಹವಾಸವು ಅವನಿಗೆ ಲಭಿಸಿತು. ಸಶಸ್ತ್ರ ಸಂಗ್ರಾಮದಿಂದಲೇ ಸ್ವಾತಂತ್ರ್ಯ ಸಂಪಾದನೆಯಾಗುವುದೆಂದು ಅವನಿಗೆ ಮನವರಿಕೆಯಾಯಿತು. ದೇಶದ ಯುವಕರನ್ನೆಲ್ಲ ಕ್ರಾಂತಿಪಕ್ಷದಲ್ಲಿ ಸೇರಿಸಿ ಸ್ವಾತಂತ್ರ್ಯ ಸೈನಿಕರ ತಂಡವೊಂದನ್ನು ನಿರ್ಮಿಸಬೇಕೆಂಬ ವಿಚಾರವು ಅವನ ಅಂತಃಕರಣದಲ್ಲಿ ಆಳವಾಗಿ ಬೇರೂರಿತು. ತನ್ನ ಜೀವನಧ್ಯೇಯದ ಸಾಕ್ಷಾತ್ಕಾರ ಮಾಡಿಕೊಂಡು ಕರ್ತವ್ಯ ಪಥದಲ್ಲಿ ಮುಂದುವರಿಯಲು ಆವಶ್ಯಕವಾದ ಸಾಧನಸಂಚಯ ಮಾಡಲು ಭಗತ್‌ಸಿಂಗನು ಉಪಕ್ರಮಿಸಿದನು. ೧೯೨೫ ರ ವರುಷವಾಗಿತ್ತದು. ತನ್ನ ಉಪಕ್ರಮದಲ್ಲಿ ಹಾಗೂ ಅಂಗೀಕೃತ ಕಾರ್ಯದಲ್ಲಿ ಅವನು ಇಬ್ಬರು ಜತೆಗಾರರನ್ನು ದೊರಕಿಸಿದನು. ಸುಖದೇವ ಮತ್ತು ಭಗವತಿಚರಣ ಇವರೇ ಅವನ ನಿಷ್ಠಾವಂತ ಸಹಕಾರಿಗಳಾಗಿದ್ದರು. ಈ ಮೂವರೂ ಸೇರಿ ಶಿಕೋಪ್ರೊಸ್ಕಿ ಮತ್ತು ಕ್ರಿಪೋಟಿನ್ ಈ ರಶಿಯನ್ ಕ್ರಾಂತಿಕಾರಿಗಳ ಹಾಗೆ ತಮ್ಮದೊಂದು ಅಭ್ಯಾಸ ಮಂಡಲವನ್ನು ರಚಿಸಿದರು. "ಜನತಾ ಸೇವಾ ಸಮಾಜ" ದವರು ಈ ಕ್ರಾಂತಿಕಾರಿ ವಿದ್ಯಾರ್ಥಿಗಳಿಗೆ ಉದಾರ ಹೃದಯದಿಂದ ಸಹಾಯ ಮಾಡಿದರು. ಅವರು ಕೇಳಿದ ಎಲ್ಲ ಪುಸ್ತಕಗಳನ್ನು ದ್ವಾರಕಾದಾಸ ವಾಚನಾಲಯಕ್ಕೆ "ಸಮಾಜ" ದವರು ತರಿಸಿ ಕೊಡುತ್ತಿದ್ದರು. ಈ ವಾಚನಾಲಯದಲ್ಲಿ ಐರ್ಲಂಡ್, ಇಟಲಿ ಮತ್ತು ರಷ್ಯಾ ದೇಶಗಳ ಕ್ರಾಂತಿಕಾಲದ ಚರಿತ್ರೆಯ ಅತ್ಯಂತ ನೂತನ ಪ್ರಕಾಶನಗಳನ್ನು ಸಂಗ್ರಹಿಸಲಾಗಿತ್ತು. ರಷ್ಯನ್ ಕ್ರಾಂತಿಯ ಆರಂಭದ ಚರಿತ್ರೆಯನ್ನು ಕುರಿತು ಅನೇಕ ಅಪರೂಪ ಪುಸ್ತಕಗಳನ್ನೂ ತರಿಸಲಾಗಿತ್ತು. ಭಗತ್‌ಸಿಂಗನು ಆಳವಾದ ಅಭ್ಯಾಸವನ್ನು ಆರಂಭಿಸಿದನು. ಅವನು ಚರಿತ್ರೆ, ರಾಜಕಾರಣ ಮತ್ತು ಅರ್ಥಶಾಸ್ತ್ರ ಈ ವಿಷಯಗಳ ಅಭ್ಯಾಸ

ವನ್ನು ಹೃತ್ಪೂರ್ವಕವಾಗಿ ಮಾಡಿದನು. ಇಡಿ ಜೀವಮಾನದಲ್ಲಿ ಅವನಿಗೆ ಸಾಹಿತ್ಯವು ಒದಗಿಸಿಕೊಟ್ಟ ಬುದ್ಧಿಯ ಭಾಂಡಾರವನ್ನು ಅವನು ೧೯೨೪–೨೬ ಈ ವರ್ಷದಲ್ಲಿ ತನ್ನ ಅಭ್ಯಾಸದಿಂದ ನಿರ್ಮಿಸಿಕೊಂಡನು. ಅವನ ಆಳವಾದ ಅಭ್ಯಾಸವು ಕ್ರಾಂತಿಯಲ್ಲಿಯ ಅವನ ನಂಬಿಕೆಯನ್ನು ದೃಢಪಡಿಸಿತು. ರಶ್ಯನ್ ಕ್ರಾಂತಿಯ ಆದರ್ಶವೂ ಅರ್ಥಶಾಸ್ತ್ರದ ಅಭ್ಯಾಸವೂ ಅವನನ್ನು ಸಮಾಜವಾದಿಯನ್ನಾಗಿ ಮಾಡಿದವು. ಆಳವಾದ ಅಭ್ಯಾಸ ಮತ್ತು ಗಂಭೀರವಾದ ವಿಚಾರದಿಂದ ಸಶಸ್ತ್ರಕ್ರಾಂತಿಯಿಂದ ಮಾತೆಯ ಮುಕ್ತಿಯನ್ನು ಮಾಡುವುದು ಮತ್ತು ಸಮಾಜವಾದೀ ಸ್ವರೂಪದ ರಾಜ್ಯಘಟನೆಯನ್ನು ನಿರ್ಮಿಸುವುದು ತನ್ನ ಜೀವನದ ಧ್ಯೇಯವೆಂದು ನಿಶ್ಚಯಿಸಿ ಆ ಧ್ಯೇಯ ಸಾಧನೆಗಾಗಿ ಅವಿಶ್ರಾಂತವಾಗಿ ಹೆಣಗುವುದೇ ತನ್ನ ಕರ್ತವ್ಯವೆಂದು ಅರಿತುಕೊಂಡನು.

## ಕ್ರಾಂತಿಪಕ್ಷದಲ್ಲಿಯ ಚಟುವಟಿಕೆಗಳು

ವಿಚಾರಪೂರ್ವಕವಾಗಿಯೇ ಕ್ರಾಂತಿಕಾರಿಯಾದ ಭಗತ್‌ಸಿಂಗನು ಬರಿ ಪುಸ್ತಕಗಳನ್ನು ಓದುವದರಲ್ಲಿಯೇ ತನ್ನ ಕಾಲವನ್ನು ಕಳೆಯಲಿಲ್ಲ. ಕ್ರಾಂತಿಕಾರಿ ಸಂಸ್ಥೆಗಳೊಡನೆ ಮತ್ತು ಗುಪ್ತ ಸಂಸ್ಥೆಗಳ ಸದಸ್ಯರೊಡನೆ ಅವನು ಸಂಪರ್ಕವನ್ನು ಬೆಳಿಸುತ್ತಿದ್ದನು. ಅವರ ರೀತಿ ನೀತಿಗಳನ್ನರಿತುಕೊಳ್ಳುತ್ತಿದ್ದನು. ಮತ್ತು ಕಾರ್ಯದ ಪ್ರಗತಿಯನ್ನು ನಿರೀಕ್ಷಿಸುತ್ತಿದ್ದನು. ಕ್ರಾಂತಿಕಾರಿಗಳ ತವರುಮನೆಯಾದ ಸಂಯುಕ್ತಪ್ರಾಂತಕ್ಕೆ ಅವನು ಮೇಲಿಂದ ಮೇಲೆ ಹೋಗುತ್ತಿದ್ದನು. ಲಖನೌ ನಗರಕ್ಕೆ ಕೂಡ ಅವನು ಕೆಲವು ಬಾರಿ ಹೋಗಿದ್ದನು. ಆ ಸಮಯಕ್ಕೆ ಕಾಕೋರಿ ಒಳಸಂಚಿನ ಮೊಕದ್ದಮೆಯು ನಡೆಯುತ್ತಿದ್ದು, ಆಪಾದಿತರೆಲ್ಲರು ಅಲ್ಲಿಯ ಜಿಲ್ಹಾ ಜೈಲಿನಲ್ಲಿದ್ದರು. ಭಗತ್‌ಸಿಂಗನು ಯುಕ್ತಿ ಪ್ರಯುಕ್ತಿಗಳಿಂದ ಕಚ್ಚಾ ಕೈದಿನಲ್ಲಿದ್ದ ಆ ಬಂಧಿತ ಕ್ರಾಂತಿಕಾರಿಗಳೊಡನೆ ಸಂಪರ್ಕ ಬೆಳಿಸಿದನು. ಅವರು ತಮ್ಮೆಲ್ಲರ ಬಿಡುಗಡೆಗಾಗಿ ಏನಾದರೂ ಪ್ರಯತ್ನ ಮಾಡಬೇಕೆಂದು ತಮ್ಮ ಇಚ್ಛೆಯನ್ನು ವ್ಯಕ್ತ ಮಾಡಿದರು. ಭಗತ್‌ಸಿಂಗನಾದರೂ ಮನಃಪೂರ್ವಕವಾಗಿ ಅವರ ಬಿಡುಗಡೆಗೆ ಯತ್ನ ನಡಿಸಿದನು. ಈ ಸಂದರ್ಭದಲ್ಲಿ ಅವನು ಸ್ವತಃ ಬಂಧಿತನಾಗುವ ಪ್ರಸಂಗಗಳೂ ಎರಡುಸಲ

ಬಂದವು. ಆದರೆ ಅವನು ಜಾರಿದನು. ಕೊನೆಗೂ ಅವನ ಪ್ರಯತ್ನವು ಫಲಿಸಲಿಲ್ಲ.

ಶೀಘ್ರವೇ ಆ ಮೊಕದ್ದಮೆಯು ತೀರ್ಮಾನವಾಗಿ ೪ ಜನರಿಗೆ ಗಲ್ಲಿನ ಶಿಕ್ಷೆಯೂ ಉಳಿದವರಿಗೆ ಭಾರಿ ಶಿಕ್ಷೆಗಳೂ ವಿಧಿಸಲ್ಪಟ್ಟವು. ಇದರಿಂದ ಧೀರ ಭಗತ್‌ಸಿಂಗನ ಭಾವನೆಗಳು ಬಹುವಾಗಿ ಉದ್ರೇಕಗೊಂಡವು ಭಾವನಾವೇಗದ ಆ ಭರದಲ್ಲಿ ಅವನು ಅವರ ಮುಯ್ಯಿ ತೀರಿಸಿಕೊಳ್ಳಬೇಕೆಂದು ಯೋಚಿಸಿದನು. ಕೆಲವು ದಿವಸಗಳನ್ನು ಆ ವ್ಯರ್ಥ ಪ್ರಯತ್ನದಲ್ಲಿಯೇ ಕಳೆದನು. ಯಶಸ್ಸಿನ ಆಶೆಯೂ ಮಾಯವಾಯಿತು. ಭಾವನಾವೇಗವೂ ಇಳಿದುಹೋಯಿತು. ಅವನು ಮುಯ್ಯಿ ತೀರಿಸಿಕೊಳ್ಳುವ ಬಯಕೆಯನ್ನು ಬದಿಗಿರಿಸಿ ಬೇರೆ ಕಾರ್ಯದತ್ತ ಹೊರಳಿದನು.

ಕಾಕೋರಿ ಪ್ರಕರಣದಿಂದಾಗಿ ಕ್ರಾಂತಿಕಾರಿಗಳ ಮುಖಂಡರೆಲ್ಲ ಸೆರೆಮನೆಯಲ್ಲಿ ಬಿದ್ದು ಕೊಳೆಯುತ್ತಿದ್ದರು. ಕೆಲವರಂತೂ ಗಲ್ಲಿಗೇರಿ ಚಿರಂಜೀವಿಗಳಾದರು. ಹೊರಗೆ ಉಳಿದಿದ್ದ ಕಾರ್ಯಕರ್ತರೆಲ್ಲ ಅನನುಭವಿಗಳಾಗಿದ್ದರಿಂದ ಯಾವ ಕಾರ್ಯವನ್ನು ಕೈಗೊಳ್ಳಲೂ ಅಸಮರ್ಥರಾಗಿದ್ದರು. ಕ್ರಾಂತಿಪಕ್ಷವು ಸಂಪೂರ್ಣವಾಗಿ ಅಸಂಘಟಿತವಾಗಿತ್ತು. ಅನೇಕ ಕ್ರಾಂತಿಕಾರಿಗಳು ನಿರಾಶರಾಗಿದ್ದು ಅವರ ಮನೋಧೈರ್ಯವು ಕುಸಿದುಹೋಗಿತ್ತು. ಝುಡತಿ ದಸ್ತಗಿರಿಗಳಿಂದ ಸಹಾನುಭೂತಿಯುಳ್ಳವರೆಲ್ಲ ಭಯಭೀತರಾಗಿದ್ದರು. ಆದುದರಿಂದ ಸ್ಥಿರವಾದ ಕಾರ್ಯವನ್ನೇನಾದರೂ ಕೈಗೊಳ್ಳಬೇಕೆಂಬ ಉದ್ದೇಶದಿಂದ ೧೯೨೬ ರಲ್ಲಿ ಕಾನಪೂರದಲ್ಲಿ ಪಕ್ಷಪ್ರಮುಖರ ಸಭೆಯೊಂದು ಸೇರಿತು. ಪಕ್ಷವನ್ನು ಸಂಘಟಿಸಿ ಬಲಶಾಲಿಯನ್ನಾಗಿ ಮಾಡುವುದೇ ಮೊದಲನೆಯ ಕೆಲಸವೆಂದು ಗೊತ್ತು ಮಾಡಲಾಯಿತು. ಹೊಸ ಉತ್ಸಾಹದ ಕಾರ್ಯಕರ್ತರಾದ ಭಗತ್‌ಸಿಂಗ ಮತ್ತು ವಿಜಯಕುಮಾರಸಿಂಹ ಇವರಿಗೆ ಈ ಕಾರ್ಯವನ್ನು ಒಪ್ಪಿಸಲಾಯಿತು. ಈ ಕಾರ್ಯಸಾಧನೆಗಾಗಿ ಭಗತ್‌ಸಿಂಗನು ವಿಜಯಕುಮಾರಸಿಂಹನೊಡನೆ ಬಿಹಾರ, ಪಂಜಾಬ, ಯುಕ್ತಪ್ರಾಂತಗಳಲ್ಲೆಲ್ಲ ಸಂಚರಿಸಿ ಅಲ್ಲಲ್ಲಿ ಅಸಂಘಟಿತರಾಗಿ ಹರಡಿದ್ದ ಯುವಕರಲ್ಲಿ ಪರಸ್ಪರ ಸಂಬಂಧವನ್ನು ಬೆಳೆಯಿಸಿ ಒಂದು ಸೂತ್ರಬದ್ಧ ಸಂಘಟನೆಯನ್ನು ನಿರ್ಮಿಸುವ ಕಾರ್ಯಕ್ಕೆ ಪ್ರವೃತ್ತನಾದನು.

ಅವರು ಉತ್ಸಾಹದಿಂದ ತಮ್ಮ ಪ್ರವಾಸವನ್ನಾರಂಭಿಸಿದರು. ತರುಣ ಅಂತಃಕರಣದಲ್ಲಿ ಹುದುಗಿದ ಕಿಚ್ಚನ್ನು ಅವರು ಮತ್ತೆ ಪ್ರಜ್ವಲಿಸಲಾರಂಭಿಸಿದರು. ಬೂದಿ ಮುಚ್ಚಿದ ಕೆಂಡದಂತಿದ್ದ ಅನೇಕ ಧ್ಯೇಯವಾದಿ ಯುವಕರು ಮತ್ತೆ ಕಾರ್ಯೋನ್ಮುಖವಾಗಹತ್ತಿದರು. ಮಹನೀಯ ಆಕಾಂಕ್ಷೆಗಳು ಸ್ಫುರಿಸತೊಡಗಿದವು. ಆರಂಭದಲ್ಲಿ ದೊರೆತಂತೆ ಮುಂದೆಯಾದರೂ ಎಲ್ಲೆಲ್ಲಿಯೂ ಇದೇರೀತಿ ಯಶಸ್ಸು ಬಂದರೆ ಅಲ್ಪಾವಧಿಯಲ್ಲಿಯೇ ದೇಶಸೇವಕರ ಪ್ರಚಂಡ ತಂಡವೇ ನಿರ್ಮಾಣವಾಗುವುದು. ಬಳಿಕ ಮಾತೆಯ ಮುಕ್ತಿಗೆ ವಿಲಂಬವೆಲ್ಲಿಯದು ? ಒಬ್ಬ ಕುಶಲ ಚಿತ್ರಕಾರನಂತೆ ಭವಿಷ್ಯದ ಭವ್ಯತೆಯ ಚಿತ್ರಗಳನ್ನು ತನ್ನ ಮನಃಪಟಲದ ಮೇಲೆ ಬಣ್ಣಿಸುತ್ತ ಅತ್ಯಂತ ಆನಂದದಲ್ಲಿ ಅವನು ರಾತ್ರಿ ರಾತ್ರಿ ಕಳೆದದ್ದುಂಟು. ಅಭಿಲಾಷವೂ ಉತ್ಸಾಹವೂ ಉಕ್ಕುತ್ತಿದ್ದವು. ಕಾರ್ಯವು ಮುಂದುವರಿಯುತ್ತಿತ್ತು. ಆದರೆ............

ಆದರೆ ವಿಧಿಘಟನೆ ಬೇರೆ ತೆರನಾಗಿತ್ತು. ಭಗತ್‌ಸಿಂಗನು ತನ್ನ ಸಂಚಾರವನ್ನಾರಂಭಿಸಿ ಕೆಲವು ಸಮಯ ಸಂದಿತ್ತು. ಸಂಚಾರ ಮಾಡುತ್ತಲೇ ಅವನು ಲಾಹೋರಿಗೆ ಬಂದಿದ್ದನು. ಲಾಹೋರವು ಭಗತ್‌ಸಿಂಗನ ಜೀವನವನ್ನು ರೂಪಿಸಿದ ನಗರವು. ಅಲ್ಲಿ ಅವನ ಅನೇಕ ಸ್ನೇಹಿತರಿದ್ದರು. ಲಾಹೋರದಲ್ಲಿ ಹೆಚ್ಚಿನ ಕಾರ್ಯ ಮಾಡಬೇಕೆಂಬ ಹೆಬ್ಬಯಕೆ ಅವನದಾಗಿತ್ತು. ಅವನು ಅವಿಶ್ರಾಂತ ಪ್ರಯತ್ನಗಳನ್ನು ಮಾಡುತ್ತಲಿದ್ದನು. ಆದರೆ ಒಂದು ವಿಚಿತ್ರ ಘಟನೆ ನಡೆದು ಅವನ ಎಲ್ಲಾ ಚಟುವಟಿಕೆಗಳು ತಡೆಯಲ್ಪಟ್ಟವು. ಆಹೊತ್ತು ದಸರೆಯ ದಿವಸವಾಗಿತ್ತು. ೧೯೨೬ ರ ಅಕ್ಟೋಬರ್ ತಿಂಗಳು. ಪ್ರತಿವರುಷದಂತೆ ರಾಮಲೀಲಾ ಮೆರವಣಿಗೆಯು ವಿಜೃಂಭಣೆಯಿಂದ ಹೊರಟಿತ್ತು. ಅಕಸ್ಮಾತ್ತಾಗಿ ಯಾರೋ ಒಬ್ಬರು ಆ ಮೆರವಣಿಗೆಯಲ್ಲಿ ಬಾಂಬ್ ಎಸೆದರು. ಕೆಲವು ಸ್ತ್ರೀ–ಪುರುಷರು ಗಾಯಗೊಂಡರು. ನಗರದಲ್ಲೆಲ್ಲ ಗಲಾಟೆಯಾಯಿತು. ಪೋಲಿಸರು ತನಿಖೆ ನಡೆಸಿದರು. ಯಾವುದೋ ಒಂದು ವಿಕ್ಷಿಪ್ತ ವಿಚಾರಸರಣಿಯನ್ನನುಸರಿಸಿ ಇದು ಕ್ರಾಂತಿಪಕ್ಷದ ಕಾರ್ಯವೆಂದೇ ಅವರು ನಿರ್ಣಯಿಸಿದರು. ಮತ್ತು ಆಹೊತ್ತು ಲಾಹೋರಿನಲ್ಲಿರಬಹುದಾದ ಕ್ರಾಂತಿಕಾರಿಯ ಶೋಧ ನಡೆಸಿದರು. ಅವರ ಕಪೋಲಕಲ್ಪಿತ ಅಪರಾಧಿಯ ವರ್ಣನೆಗೆ ಸರಿಯಾಗಿ ಒಪ್ಪುತ್ತಿದ್ದ ಭಗತ್‌ಸಿಂಗನನ್ನು ಬಂಧಿಸಿ ಅವನನ್ನು

ಬೋರ್ಸ್ಟಲ್ ಜೈಲಿನಲ್ಲಿಟ್ಟರು. ಅನೇಕ ದಿವಸಗಳವರೆಗೆ ಅವನನ್ನು ನ್ಯಾಯಾಧೀಶರ ಮುಂದೆ ಹಾಜರುಪಡಿಸಲಿಲ್ಲ. ಬಂಧನದ ಕಾರಣಗಳನ್ನೂ ಅವನಿಗೆ ತಿಳಿಸಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವನು ಏಕಾಂತ ಕೊಠಡಿಯಲ್ಲಿ ಕಾಲ ಕಳೆಯಬೇಕಾಯಿತು. ಅಲ್ಲಿ ಅವನು ಆ ಜೈಲಿನಲ್ಲಿದ್ದ ರಾಜಕೀಯ ಕೈದಿಗಳೊಡನೆ ಪರಿಚಯ ಹಾಗೂ ಸಂಪರ್ಕ ಬೆಳೆಸುವ ಸಂಧಿಯನ್ನು ಮಾತ್ರ ಕಳೆದುಕೊಳ್ಳಲಿಲ್ಲ. ಈ ಸಂಪರ್ಕ ಬೆಳಿಸಿದ್ದರ ಉಪಯೋಗವಾಗಿ ಮುಂದೆ ಎರಡೂವರೆ ವರ್ಷಗಳ ನಂತರ ರಾಜಕೀಯ ಕೈದಿಗಳ ವ್ಯವಸ್ಥೆಯಲ್ಲಿ ಸುಧಾರಣೆಯನ್ನು ಸಾಧಿಸಬೇಕೆಂಬ ಉದ್ದೇಶದಿಂದ ಮಾಡಿದ ಆ ಚಿರಸ್ಮರಣೀಯ ಅನ್ನಸತ್ಯಾಗ್ರಹದಲ್ಲಿ ಅವರೂ ಭಗತ್‌ಸಿಂಗನೊಡನೆ ಸಹಭಾಗಿಗಳಾದರು.

ಯಾವುದಾದರೂ ಕ್ರಾಂತಿಕಾರಿ ಒಳಸಂಚಿನ ಸಂಬಂಧದಲ್ಲಿ ಬಂಧಿತನಾಗುವುದು ಸ್ವಾಭಾವಿಕವೆಂದು ಚಿಕ್ಕಂದಿನಿಂದಲೇ ಯಾರ ಕಲ್ಪನೆಯಾಗಿತ್ತೋ ಆ ಭಗತ್‌ಸಿಂಗನಿಗೆ ಮೇಳೆಯೊಳಗಿನ ನಿರಪರಾಧಿ ಸ್ತ್ರೀಪುರುಷರ ಮೇಲೆ ಬಾಂಬ್ ಎಸೆದ ಹೀನ ಆಪಾದನೆಯು ತನ್ನ ಮೇಲೆ ಇದೆಯೆಂಬುದನ್ನು ತಿಳಿದು ಸಖೇದಾಶ್ಚರ್ಯವಾಯಿತು. ಈ ಮೊಕದ್ದಮೆಯು ಬಹು ಕಾಲ ನಡೆದ ನಂತರ ಕೊನೆಗೊಮ್ಮೆ ಆ ವಿದ್ವಾನ್ ನ್ಯಾಯಾಧೀಶರು ಅವನ ಬಿಡುಗಡೆಗಾಗಿ ೬೦ ಸಾವಿರ ರೂಪಾಯಿ ಜಾಮೀನು ಕೇಳಿದರು. ಭಗತ್‌ಸಿಂಗನ ಮನೆಯವರಿಗೆ ಅಷ್ಟು ಹಣ ತುಂಬುವುದೇನೂ ಅಷ್ಟು ಕಠಿಣ ವಿಷಯವಾಗಿರಲಿಲ್ಲ. ಅವರು ಅವನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿಸಿದರು. ಮುಂದೆ ಭಗತ್‌ಸಿಂಗನು ವರಿಷ್ಠ ನ್ಯಾಯಾಲಯಕ್ಕೆ ಅಪೀಲು ಮಾಡಿದನಂತರ ಜಾಮೀನನ್ನು ವರಿಷ್ಠ ನ್ಯಾಯಾಲಯವು ರದ್ದುಗೊಳಿಸಿತು. ಅಪರಾಧದೊಡನೆ ಎಳ್ಳಷ್ಟೂ ಸಂಬಂಧವಿರಲು ಸಾಧ್ಯವಿಲ್ಲದ ಒಬ್ಬ ಧ್ಯೇಯವಾದಿ ಯುವಕನಿಗೆ ಅಕಾರಣವಾಗಿ ಇಷ್ಟೊಂದು ಪೀಡೆಯನ್ನು ಕೊಟ್ಟ ಈ ಘಟನೆಯು ಪೋಲೀಸರ ರೀತಿಯ ಮೇಲೆ ವಿದಾರಕ ಪ್ರಕಾಶವನ್ನು ಬೀರುತ್ತದೆ. ಇಂದು ಸ್ವತಂತ್ರ ಭಾರತದಲ್ಲಿಯೂ ಈ ರೀತಿಯಾಗುತ್ತಿರುವುದನ್ನು ಕಂಡು, 'ಧನ್ಯವಿದೆ ಈ ಪೋಲೀಸು ರಾಜ್ಯ!' ಎಂಬ ಉದ್ಗಾರ ವಿಚಾರವಂತರ ಮುಖದಿಂದ ಸಹಜವಾಗಿ ಹೊರಬೀಳುತ್ತದೆ.

೬೦ ಸಾವಿರ ರೂಪಾಯಿ ಜಾಮೀನು ಕೊಟ್ಟು ಬಿಡುಗಡೆಯಾದ ಭಗತ್‌ಸಿಂಗನು ಜಾಮೀನು ರದ್ದಾಗುವವರೆಗೆ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗ ವಹಿಸುವುದು ಸಾಧ್ಯವಿರಲಿಲ್ಲ. ಆದರೂ ಈ ಅವಧಿಯಲ್ಲಿ ಅವನು ಎರಡು ಕಾರ್ಯಗಳನ್ನು ಸಾಧಿಸಿದನು. ಮೊದಲನೆಯದೆಂದರೆ ಸುಪ್ರಸಿದ್ಧ 'ನವ ಜವಾನ್ ಭಾರತ ಸಭೆ' ಯನ್ನು ಸಂಘಟಿಸಿದನು. ಎರಡನೆಯದೆಂದರೆ ಕಾಕೋರಿ ಪ್ರಕರಣದಲ್ಲಿ ಶಿಕ್ಷೆಗೊಳಗಾದ ಕ್ರಾಂತಿಕಾರಿಗಳ ಸ್ಮರಣಾರ್ಥವಾಗಿ ಜಾಹೀರ ಕಾರ್ಯಕ್ರಮವನ್ನೇರ್ಪಡಿಸಿದನು.

'ನವಜವಾನ್ ಭಾರತ ಸಭೆ' ಯು ಪಂಜಾಬಿನ ಯುವಕರ ಪ್ರಮುಖ ರಾಜಕೀಯ ಸಂಘಟನೆಯಾಗಿ ರೂಪುಗೊಂಡಿತು. ಮತ್ತು ತನ್ನ ಚಟುವಟಿಕೆಗಳ ಮೂಲಕ ಕಾಂಗ್ರೆಸ್ಸಿನ ಕಾರ್ಯಕಲಾಪಗಳ ಮೇಲೆ ಸಹ ತನ್ನ ಪ್ರಭಾವವನ್ನು ಬೀರಿತು ಈ ಸಂಘಟನೆಯು ಕಾಂಗ್ರೆಸ್ಸಿನಿಂದ ಬೇರೆಯಾಗಿತ್ತು; ಇಷ್ಟೇ ಅಲ್ಲ, ಕೆಲವು ಅಂಶಗಳಲ್ಲಿ ಕಾಂಗ್ರೆಸ್ಸಿಗೆ ವಿರೋಧಿಯಾಗಿತ್ತು. ಸಮಾಜವಾದಿಯಾದ ಭಗತ್‌ಸಿಂಗನಿಗೆ ಬರಿ ರಾಜಕೀಯ ಸ್ವಾತಂತ್ರ್ಯದಿಂದ ಭಾರತದ ವಿಮೋಚನೆಯಾಗದು. ಅದಕ್ಕೆ ಆರ್ಥಿಕ ಸ್ವಾತಂತ್ರ್ಯವೂ ಆವಶ್ಯಕವಿದೆಯೆಂದು ಮನವರಿಕೆಯಾಗಿತ್ತು. ವಿಶ್ವದಲ್ಲಿನ ಬಡತನದ ಸಮಸ್ಯೆಯ ಅಭ್ಯಾಸವನ್ನು ಮಾಡಿ ಅವನು ಈ ನಿರ್ಣಯಕ್ಕೆ ಬಂದಿದ್ದನು. ಆದುದರಿಂದ ರಷ್ಯನ್ ಸಾಮ್ಯವಾದದ ಸಿದ್ಧಾಂತಗಳನ್ನನುಸರಿಸಿ ಅವನು ಈ ಸಂಘಟನೆಯನ್ನು ರಚಿಸಿದ್ದನು. ಅವನ ವಿಚಾರದಂತೆ ದೇಶದ ಯುವಕರೆಲ್ಲ ತಮ್ಮ ಸೇವೆಯನ್ನು ಸಲ್ಲಿಸಬೇಕಾದ ರೈತರ ಮತ್ತು ಕಾರ್ಮಿಕರ ಸಂಘಟನೆಯಾಗಿತ್ತನು.

ಇದೇ ಸಮಯಕ್ಕೆ ಸೋಹನಸಿಂಗ ಜೋಶ್ ಇವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಸಮಾಜವಾದಿ ಪತ್ರಿಕೆ 'ಕಿರ್ತಿ' ಯ ಸಂಪಾದಕ ಮಂಡಳಿಯಲ್ಲಿಯೂ ಭಗತ್‌ಸಿಂಗನು ಕೆಲಸ ಮಾಡಿದನು.

ಕಾಕೋರಿ ಪ್ರಕರಣದಲ್ಲಿ ಗಲ್ಲಿಗೇರಿದ ದೇಶಸೇವಕರ ಪ್ರಥಮ ಶ್ರಾದ್ಧದ ದಿವಸ ಅವರ ಸ್ಮರಣಾರ್ಥವಾಗಿ ಜಾಹೀರ ಕಾರ್ಯಕ್ರಮವನ್ನೇರ್ಪಡಿಸಬೇಕೆಂದು ಭಗತ್‌ಸಿಂಗನು ಆಲೋಚಿಸಿದನು. ಆದರ ಸಿದ್ಧತೆಯನ್ನು ಮಾಡುತ್ತಿರುವಾಗ ೧೯೧೪-೧೫ ರ ಲಾಹೋರ ಒಳಸಂಚಿನ ಮೊಕದ್ದಮೆಯಲ್ಲಿ ಸಾವಿಗೀಡಾದ ಮತ್ತು ಭಾರತಕ್ಕಾಗಿ ತಮ್ಮ ಪ್ರಾಣಗಳನ್ನರ್ಪಿಸಿದ

ಯುವಕರ ಚರಿತ್ರೆಗಳ ವಿಷಯವಾಗಿ ಸಾರ್ವಜನಿಕ ಭಾಷಣಗಳನ್ನು ಮಾಡ ಬೇಕೆಂಬ ವಿಚಾರವು ಅವರ ಮನಸ್ಸಿನಲ್ಲಿ ಮೂಡಿತು. ಅವರೆಲ್ಲರ ಭಾವ ಚಿತ್ರಗಳನ್ನು ಸಂಪಾದಿಸಿ ಮ್ಯಾಜಿಕ್ ಲ್ಯಾಂಟರ್ನಿನಲ್ಲಿ ಸೇರಿಸಿದನು. ಮ್ಯಾಜಿಕ್ ಲ್ಯಾಂಟರ್ನಿನ ಸಹಾಯದಿಂದ ಉತ್ತರ ಹಿಂದುಸ್ಥಾನವೆಲ್ಲೆಲ್ಲ ಭಾಷಣಗಳನ್ನೇ ರ್ಪಡಿಸಬೇಕೆಂದು ಆವನ ಯೋಜನೆಯಾಗಿತ್ತು. ದೊಡ್ಡ ರಕಮನ್ನು ಜಾಮೀ ನಿಟ್ಟಿದ್ದರಿಂದ ಸ್ವತಃ ತಾನೇ ಭಾಷಣ ಮಾಡುವುದು ಅವನಿಗೆ ಅಸಾಧ್ಯ ವಾಗಿತ್ತು. ಆದ್ದರಿಂದ ಅವನು ತನ್ನ ಸಹಕಾರಿಯಾದ ಭಗವತಿಚರಣರಿಗೆ ಎಲ್ಲ ಸಲಕರಣೆಗಳನ್ನೂ ಭಾಷಣದ ಟಿಪ್ಪಣಿಗಳನ್ನೂ ಮತ್ತು ಇನ್ನಿತರ ಉಪ ಯುಕ್ತ ಸೂಚನೆಗಳನ್ನೂ ಕೊಟ್ಟು ಈ ಕೆಲಸಕ್ಕೆ ಅವರನ್ನು ಚೆನ್ನಾಗಿ ತರಬೇತು ಮಾಡಿದನು. ಬ್ರಾಡ್ಲೆ ಹಾಲ್‌ನಲ್ಲಿ ನಡೆದ ಮೊದಲನೆಯ ಭಾಷಣದ ಸಮ ಯಕ್ಕೆ ಉಸುರುಗಟ್ಟುವಷ್ಟು ಜನಗಳು ಕಿಕ್ಕಿರಿದು ನೆರೆದಿದ್ದರು. ಬಂದವ ರೆಲ್ಲರೂ ಭಾಷಣವನ್ನು ಪೂರ್ತಿ ಗಮನವಿಟ್ಟು ಕೇಳುತ್ತಿದ್ದರು. ಈ ಭಾಷಣ ಗಳು ವಿಲಕ್ಷಣವಾಗಿ ಯಶಸ್ವಿಯಾಗುತ್ತಿದ್ದರಿಂದ ಕ್ರಾಂತಿಪಕ್ಷದ ಪ್ರಚಾರವು ಬಿರುಸಾಗಿ ನಡೆಯುವುದೆಂಬ ಭಯದಿಂದ ಪಂಜಾಬ್ ಸರಕಾರವು ಅವುಗಳ ಮೇಲೆ ಪ್ರತಿಬಂಧ ಹಾಕಿತು. ಈ ರೀತಿಯ ಸಾರ್ವಜನಿಕ ಕಾರ್ಯದಲ್ಲಿಯ ನಿಪುಣತೆಯೂ ಪ್ರಚಾರ ಪದ್ಧತಿಯಲ್ಲಿಯ ಕಲ್ಪನಾನವ್ಯತೆಯೂ ಭಗತ್ ಸಿಂಗನ ಜೀವನದಲ್ಲಿಯ ಒಂದು ಅಮೂಲ್ಯ ಅಂಶವಾಗಿದೆ. ಆದರೆ ಜನ್ಮ ಜಾತ ಹಾಗೂ ಪ್ರತಿಜ್ಞಾಬದ್ಧ ಕ್ರಾಂತಿಕಾರಿಯಾದ ಆವನಿಗೆ ಈ ವಿಷಯದತ್ತ ಗಮನ ಕೊಡಲು ಸಮಯವು ಹೇಗೆ ತಾನೇ ಸಿಗಬೇಕು ?

## ಹಿಂದುಸ್ಥಾನ ಸೋಷಲಿಸ್ಟ್ ರಿಪಬ್ಲಿಕನ್ ಅಸೋಸಿಯೇಶನ್

ದಿವಂಗತ ಶಚೀಂದ್ರನಾಥ ಸನ್ಯಾಲರು ರಾಮಪ್ರಸಾದ್ ಬಿಸ್ಮಿಲ್ ಮತ್ತು ಜೋಗೇಶ ಚಟರ್ಜಿಯಂತಹ ಧುರಂಧರ ಕ್ರಾಂತಿಕಾರಿಗಳ ಸಹಾಯ ದಿಂದ 'ಹಿಂದುಸ್ಥಾನ ರಿಪಬ್ಲಿಕನ್ ಅಸೋಸಿಯೇಷನ್' ಎಂಬ ಹೆಸರಿನ ಕ್ರಾಂತಿಕಾರಿಗಳ ಸಂಸ್ಥೆಯೊಂದನ್ನು ರಚಿಸಿದರು. ಪಂಜಾಬದಿಂದ ಬಂಗಾಲದ ವರೆಗಿನ ಎಲ್ಲ ಕ್ರಾಂತಿಕಾರಿಗಳನ್ನೂ ಅವರ ಗುಪ್ತ ಸಂಸ್ಥೆಗಳನ್ನೂ ಈ ಬೃಹತ್

ಸಂಸ್ಥೆಯಲ್ಲಿ ಸೇರಿಸಿ ಅವರ ಚಟುವಟಿಕೆಗಳನ್ನೂ ಕಾರ್ಯವನ್ನೂ ಸೂತ್ರಬದ್ಧ ಮಾಡಿದರು. ಕ್ರಾಂತಿಪಕ್ಷದ ಕರೆಗೆ ಓಗೊಟ್ಟು ದೇಶಕ್ಕಾಗಿ ಸರ್ವಸ್ವವನ್ನು ಅರ್ಪಿಸಲು ಸದಾಸಿದ್ಧವಾಗಿದ್ದ ಯುವಕರ ಒಂದು ಭಾಗವನ್ನು ಈ ಸಂಸ್ಥೆಯ ಅಂಗವಾಗಿ ಸಿದ್ಧಗೊಳಿಸಲಾಯಿತು. ಇದಕ್ಕೆ ಹಿಂದುಸ್ಥಾನ ರಿಪಬ್ಲಿಕನ್ ಆರ್ಮಿ ಎನ್ನುತ್ತಿದ್ದರು. ಅದು ಕ್ರಾಂತಿಪಕ್ಷದ ಸೇನಾವಿಭಾಗವಾಗಿತ್ತು. ಈ ರೀತಿ ಯೋಜನಾಬದ್ಧವಾಗಿ ಈ ಸಂಸ್ಥೆಯು ಕೆಲವು ಕಾಲ ಕಾರ್ಯವನ್ನು ಮಾಡಿತು. ಆದರೆ ಕಾಕೋರಿ ಪ್ರಕರಣದಲ್ಲಿ ರಾಮಪ್ರಸಾದ್ ಬಿಸ್ಮಿಲ್ ಮೊದಲಾದವರಿಗೆ ಗಲ್ಲಿನ ಶಿಕ್ಷೆಯಾದ್ದರಿಂದಲೂ ಮತ್ತು ಸ್ವತಃ ಶಚೀಂದ್ರನಾಥ ಸನ್ಯಾಲರು ಗೂಢಚಾರರ ಕಾಟವನ್ನು ತಪ್ಪಿಸಿ ಭಾರತವನ್ನು ಬಿಟ್ಟು ಅಮೇರಿಕೆಗೆ ತೆರಳಿದ್ದರಿಂದಲೂ ಕ್ರಾಂತಿಪಕ್ಷವು ನಾಯಕರ ಅಭಾವದಿಂದ ಅಸಂಘಟಿತವಾಯಿತು. ನಗರ ನಗರಗಳಲ್ಲಿ ಕ್ರಾಂತಿಕಾರಿಗಳ ಪ್ರತ್ಯೇಕ ಗುಂಪುಗಳು ನಿರ್ಮಾಣವಾಗಿದ್ದವು. ಕ್ರಾಂತಿಪಕ್ಷದ ಸದಸ್ಯರ ಮುಂದೆ ಯಾವೊಂದು ನಿರ್ದಿಷ್ಟ ಕಾರ್ಯಕ್ರಮವೂ ಇರಲಿಲ್ಲ. ಮುಂದೆ ಮಾಡಬೇಕಾದ ಕೆಲಸದ ಯಾವ ಯೋಜನೆಯೂ ಇರಲಿಲ್ಲ. ಇಂತಹ ಸಂದಿಗ್ಧ ವಾತಾವರಣದಲ್ಲಿ ಅಲೆದಾಡುವ ಕ್ರಾಂತಿಕಾರಿಗಳ ಗುಂಪುಗಳು ಲಾಹೋರ ದಿಲ್ಲಿಗಳಲ್ಲಿಯೂ, ಯುಕ್ತಪ್ರಾಂತದ ಕಾನಪೂರ, ಕಾಶಿ, ಪ್ರಯಾಗ ಮೊದಲಾದ ಸ್ಥಳಗಳಲ್ಲಿಯೂ ಇದ್ದವು.

ಇವೆಲ್ಲವುಗಳಲ್ಲಿ ಪರಸ್ಪರ ಸಂಬಂಧವನ್ನು ಉಂಟು ಮಾಡಿ ಯೋಜನಾಬದ್ಧ ಕಾರ್ಯಕ್ರಮವನ್ನಾರಂಭಿಸಬೇಕೆಂದು ೧೯೨೬ ರಲ್ಲಾದ ಕಾನಪೂರದ ಪಕ್ಷಪ್ರಮುಖರ ಸಭೆಯಲ್ಲಿ ನಿರ್ಣಯವೇನೋ ಅಂಗೀಕೃತವಾಗಿತ್ತು. ಆದರೆ ಅದು ಪ್ರತ್ಯಕ್ಷ ಕಾರ್ಯರೂಪಕ್ಕಿಳಿಯಲಿಲ್ಲ. ಜಾಮೀನಿನ ಮೂಲಕ ಭಗತ್ ಸಿಂಗನು ಸಹ ಈ ದಿಕ್ಕಿನಲ್ಲಿ ಯಾವ ಕಾರ್ಯವನ್ನೂ ಮಾಡಲು ಅಸಮರ್ಥನಾಗಿದ್ದನು. ಆದರೆ ವರಿಷ್ಠ ನ್ಯಾಯಾಲಯದ ತೀರ್ಪಿನಂತೆ ಜಾಮೀನಿನ ರಕಮು ವಾಪಸಾಗಿ ಕೈಗೆ ಬಂದದ್ದೊಂದೇ ತಡ. ಭಗತ್‌ಸಿಂಗನು ಪಕ್ಷದ ಸಂಘಟನೆಯ ಕಾರ್ಯವನ್ನು ಕೈಕೊಂಡನು. ಇದೇ ಸಮಯಕ್ಕೆ ಕಾಕೋರಿ ಒಳಸಂಚಿನಂತಹ ೬-೭ ಒಳಸಂಚಿನ ಮೊಕದ್ದಮೆಗಳಲ್ಲಿ ಫರಾರಿ ಆರೋಪಿಯೆಂದು ಖ್ಯಾತಿ ಪಡೆದಿದ್ದ ಹಾಗೂ ಮುಂದೆ ೨೭-೨-೧೯೩೧ ನೆಯ ದಿವಸ

ಅಲ್ಹಾಬಾದಿನ ಎಲ್‌ಫಿನ್‌ಸ್ಟನ್ ಪಾರ್ಕಿನಲ್ಲಿ ಪೋಲಿಸರೊಡನೆ ಯುದ್ಧ ಮಾಡುತ್ತ ವೀರಮರಣವನ್ನೈದಿದ ವಿಖ್ಯಾತ ಕ್ರಾಂತಿಕಾರಿ ಸೇನಾಪತಿ ಚಂದ್ರ ಶೇಖರ ಆಜಾದನೂ ಭಗತ್‌ಸಿಂಗನಿಗೆ ಸಿಕ್ಕಿದನು. ಆಜಾದನ ಹೆಸರು ಕ್ರಾಂತಿಕಾರಿಗಳಿಗೆಲ್ಲ ಅದ್ವಿತೀಯ ಆದರ್ಶವೂ ಸ್ಫೂರ್ತಿಯ ಆಗರವೂ ಆಗಿತ್ತು. ಹೀಗೆ ಎಲ್ಲ ಬದಿಯಿಂದಲೂ ಅನುಕೂಲ ಸಮಯ ಒದಗಿ ಬಂದಿತು. ೧೯೨೮ರ ಜುಲೈ ತಿಂಗಳಲ್ಲಿ ಕಾನಪೂರದಲ್ಲಿ ಪ್ರಮುಖ ಕ್ರಾಂತಿಕಾರಿಗಳ ಪ್ರಾಥಮಿಕ ಸಭೆ ಯೊಂದು ಸೇರಿತು. ಕೂಡಲೆ ಪ್ರಾಂತಪ್ರಾಂತಗಳಲ್ಲಿಯ ಪ್ರಮುಖ ಪ್ರಾತಿ ನಿಧಿಕ ಸದಸ್ಯರನ್ನೊಳಗೊಂಡ ಕೇಂದ್ರ ಸಮಿತಿಯೊಂದನ್ನು ರಚಿಸಬೇಕೆಂದು ಈ ಸಭೆಯು ನಿರ್ಣಯ ಮಾಡಿತು.

ಕ್ರಾಂತಿಕಾರಿಗಳ ಚಟುವಟಿಕೆಗಳು ಬಿರುಸಾಗಿ ನಡೆದವು. ಕೆಲವು ಕಾಲ ಆವರಿಸಿದ್ದ ಶೈಥಿಲ್ಯವು ಅಳಿಯಿತು. ಹೊಸ ಚೈತನ್ಯವು ಸಂಚರಿಸಿತು. ಭಗತ್‌ಸಿಂಗ ಮತ್ತು ವಿಜಯಕುಮಾರಸಿಂಹರು ಬೇರೆ ಬೇರೆ ಪ್ರಾಂತಗಳಲ್ಲಿ ಸಂಚರಿಸಿ ಪ್ರಮುಖ ಕ್ರಾಂತಿಕಾರಿಗಳನ್ನು ಸಂದರ್ಶಿಸಿದರು. ಅವರು ಆಯಾ ಪ್ರಾಂತಗಳ ಪ್ರಮುಖರಿಗೆ ಕೇಂದ್ರ ಸಮಿತಿಯ ರಚನೆಗಾಗಿ ಆಹ್ವಾನಕೊಟ್ಟರು. ೧೯೨೮ ರ ಸಪ್ಟೆಂಬರ ತಿಂಗಳಲ್ಲಿ ದಿಲ್ಲಿ ರಾಜಧಾನಿಯಲ್ಲಿ ಒಂದು ಮಹತ್ವದ ಸಭೆ ಸೇರಿತು. ಬಿಹಾರ, ಯುಕ್ತಪ್ರಾಂತ, ಪಂಜಾಬ ಮತ್ತು ರಾಜಪುತಾನಾ ಗಳಿಂದ ಇಬ್ಬರು ಮೂವರು ಪ್ರತಿನಿಧಿಗಳು ಆಗಮಿಸಿದ್ದರು.

ಈ ಸಭೆಯ ಕಾರ್ಯಕಲಾಪಗಳು ಎರಡು ದಿವಸ ನಡೆದು ಅತ್ಯಂತ ಮಹತ್ವದ ನಿರ್ಣಯಗಳನ್ನು ಅಂಗೀಕರಿಸಲಾಯಿತು. ಈ ಸಭೆಯಲ್ಲಿ ಭಗತ್ ಸಿಂಗನು ಸಮಾಜವಾದಿ ಕಾರ್ಯಕರ್ತನ ನಿಲುಮೆಯನ್ನು ಸ್ವೀಕರಿಸಿದ್ದನು. ಅವನ ಪ್ರಬಲ ಪ್ರತಿಪಾದನೆಯ ಪರಿಣಾಮವಾಗಿ ಕಾರ್ಯಕ್ರಮಗಳ ಯೋಜ ನೆಯು ಸಮಾಜವಾದಿ ಸಿದ್ಧಾಂತಗಳಿಗನುರೂಪವಾಗಿ ಸಿದ್ಧಪಡಿಸಲಾಯಿತು. ಇದರಿಂದಾಗಿ ಈ ಪಕ್ಷದ ಅನೇಕ ಸದಸ್ಯರಿಗೆ ಪ್ರಿಯವಾಗಿದ್ದ ಮಾಫೀ ಸಾಕ್ಷೀದಾರರ ಹಾಗೂ ಪೋಲೀಸು ಅಧಿಕಾರಿಗಳ ಕೊಲೆಯ ಕಾರ್ಯಕ್ರಮ ಹಿಂದೆ ಬಿದ್ದಿತು. ಜನತೆಯಲ್ಲಿ ಜಾಗೃತಿಯಾಗುವುದು ಮಹತ್ವದ ವಿಷಯ ವೆಂದು ಪರಿಗಣಿಸಲ್ಪಟ್ಟಿತು. ಅಲ್ಲದೆ ವೈಯಕ್ತಿಕ ಕೃತಿಗಳನ್ನು ಬದಿಗಿರಿಸಿ ಸಾಮೂಹಿಕ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕೆಂದು ಗೊತ್ತುಮಾಡಿತು.

ಪಕ್ಷವು ಸ್ವೀಕರಿಸಿದ ಸಮಾಜವಾದಿ ಸಿದ್ಧಾಂತಗಳಿಗನುರೂಪವಾಗುವಂತೆ 'ಹಿಂದುಸ್ಥಾನ ರಿಪಬ್ಲಿಕನ್ ಅಸೋಸಿಯೇಷನ್' ಎಂಬ ಪಕ್ಷದ ಹೆಸರನ್ನು ಬದಲಿಸಿ, 'ಹಿಂದುಸ್ಥಾನ ಸೋಷಲಿಸ್ಟ ರಿಪಬ್ಲಿಕನ್ ಅಸೋಸಿಯೇಷನ್' ಎಂದು ಇಡಬೇಕಾಗಿ ಭಗತ್‌ಸಿಂಗನು ಒತ್ತಾಯಪಡಿಸಿದನು. ಯುಕ್ತ ಪ್ರಾಂತದ ಪ್ರತಿನಿಧಿಗಳು ಈ ಸೂಚನೆಯನ್ನು ಬಲವಾಗಿ ವಿರೋಧಿಸಿದರು. ರಾಮಪ್ರಸಾದ ಬಿಸ್ಮಿಲ್, ಶಚೀಂದ್ರನಾಥ ಸನ್ಯಾಲ, ಜೋಗೇಶ ಚಟರ್ಜಿಯ ವರಂತಹ ವಿಖ್ಯಾತಕ್ರಾಂತಿಕಾರಿ ನಾಯಕರು ರೂಪಿಸಿದ ಮತ್ತು ಜನತೆಯಲ್ಲಿ ಅತ್ಯಂತ ಗೌರವವನ್ನು ಪಡೆದ ಹೆಸರನ್ನು ಬದಲಿಸಬಾರದೆಂದು ಅವರ ವಾದ ವಾಗಿತ್ತು. ತಾವು ಅಂಗೀಕರಿಸಿದ ಸಮಾಜವಾದಿ ಸಿದ್ಧಾಂತಗಳಿಗನುರೂಪ ಹೆಸರನ್ನು ಪಕ್ಷಕ್ಕೆ ಕೊಡುವುದರಿಂದ ಮೊದಲಿನ ಕ್ರಾಂತಿಕಾರಿ ನಾಯಕರಿಗೆ ಯಾವ ರೀತಿಯ ಅಗೌರವವನ್ನೂ ಮಾಡಿದಂತಾಗುವುದಿಲ್ಲ. ತದ್ವಿರುದ್ಧ ವಾಗಿ ಅವರ ಕಾರ್ಯದ ಬಗ್ಗೆ ಗೌರವವನ್ನಿಟ್ಟುಕೊಂಡ ನಂತರವೂ ತತ್ವನಿಷ್ಠೆ ಯನ್ನು ಬಿಡದೆ ವರ್ತಿಸಿದ್ದರ ದ್ಯೋತಕವಾಗುವುದು ಈ ಕೆಲಸ. ಜನತೆಯಲ್ಲಿ ಗೌರವವನ್ನುಂಟು ಮಾಡುವುದು ಕೊನೆಗೆ ಪ್ರಸ್ತುತ ಕಾರ್ಯಕರ್ತರು ಮಾಡುವ ಕಾರ್ಯವನ್ನೂ ಅವರ ಶೀಲವನ್ನೂ ಅವಲಂಬಿಸಿದೆ. ಹಿಂದಿನವರ ಪುಣ್ಯದ ಬಲದಿಂದ ಇಂದಿನವರು ಬಹುಕಾಲ ನಿಲ್ಲಲಾರರು. ಅಂಗೀಕರಿಸಿದ ಕಾರ್ಯ ವನ್ನು ಯಶಸ್ವಿಯಾಗಿ ನಿರ್ವಹಿಸಿದವರ ಬಗ್ಗೆ ಜನತೆಯಲ್ಲಿ ಗೌರವದ ಭಾವನೆ ತಾನಾಗಿಯೇ ಉಂಟಾಗುತ್ತದೆ. ಎಂಬ ಮೊದಲಾದ ಸೂಕ್ತವಾದ ವಾದ ಸರಣಿಯಿಂದ ಭಗತ್‌ಸಿಂಗನು ತನ್ನ ಸೂಚನೆಯ ಯಥಾರ್ಥತೆಯನ್ನು ಎಲ್ಲ ರಿಗೂ ಮನವರಿಕೆಯಾಗುವಂತೆ ತಿಳಿಸಿ ಹೇಳಿದನು. ಹಿಂದಿನ ಕ್ರಾಂತಿಕಾರಿ ಗಳ ಸಹಕಾರಿಯೂ ಎಲ್ಲರ ಗೌರವಕ್ಕೆ ಪಾತ್ರನೂ ಆದ ಆಜಾದನು ಭಗತ್ ಸಿಂಗನ ಸೂಚನೆಗೆ ಬೆಂಬಲವನ್ನಿತ್ತನು. ಕೊನೆಗೆ ಅವನ ಸೂಚನೆಯು ಅಂಗೀಕೃತವಾಗಿ ಪಕ್ಷದ ಹೆಸರನ್ನು 'ಹಿಂದುಸ್ಥಾನ ಸೋಷಲಿಸ್ಟ ರಿಪಬ್ಲಿಕನ್ ಅಸೋಸಿಯೇಷನ್' ಎಂದು ಇಡಲಾಯಿತು.

ಪಕ್ಷದ ಸದಸ್ಯರಲ್ಲಿ ಎರಡು ಭಾಗಗಳನ್ನು ಮಾಡಲಾಯಿತು. ಒಂದು ಕಾರ್ಯಶೀಲ ಸದಸ್ಯರ ವಿಭಾಗ ಮತ್ತು ಇನ್ನೊಂದು ಸಹಾನುಭೂತಿಯುಳ್ಳ ಸದಸ್ಯರ ವಿಭಾಗ. ಈ ವಿಭಾಗಗಳು ಸದಸ್ಯರು ಮಾಡುವ ಕಾರ್ಯಕ್ಕನು

ಗುಣವಾಗಿಯೇ ಇದ್ದವು. ಮೊಲನೆಯ ವಿಭಾಗವು ಪಕ್ಷದ ಕಾರ್ಯವನ್ನು ಪ್ರತ್ಯಕ್ಷ ಕೃತಿಯಲ್ಲಿ ಇಳಿಸುವ ಸೈನಿಕ-ಕಾರ್ಯಕರ್ತರದಾಗಿತ್ತು. ಅಂತೆಯೇ ಅದಕ್ಕೆ ಸೇನಾವಿಭಾಗವೆಂದು ಹೇಳಬಹುದು. ಅದರ ಹೆಸರು 'ಹಿಂದುಸ್ಥಾನ ಸೋಷಲಿಸ್ಟ ರಿಪಬ್ಲಿಕನ್ ಆರ್ಮಿ' ಎಂದಿತ್ತು. ಶಸ್ತ್ರಾಸ್ತ್ರ ಮೊದಲಾದ ಆವಶ್ಯಕ ಸಲಕರಣೆಗಳನ್ನು ಶೇಖರಿಸುವುದು, ಭಯೋತ್ಪಾದಕ ಯೋಜನೆಗಳನ್ನು ಕಾರ್ಯರೂಪಕ್ಕಿಳಿಸುವುದು ಮತ್ತು ತಮ್ಮ ಪಕ್ಷದ ಮಟ್ಟಿಗೆ ಸೀಮಿತವಾದ ಕಾರ್ಯದ ಪ್ರಚಾರವನ್ನು ಯಾವತ್ತೂ ಜನತೆಯಲ್ಲಿ ಹರಡುವಂತೆ ವಿಸ್ತಾರಗೊಳಿಸುವುದು. ಇವು ಸೇನಾವಿಭಾಗದ ಕಾರ್ಯಶೀಲ ಸದಸ್ಯರು ಮಾಡಬೇಕಾದ ಕೆಲಸಗಳಾಗಿದ್ದವು. ಕಾರ್ಯಶೀಲ ಸದಸ್ಯರು ಮಾಡುವ ಕೆಲಸಗಳಿಗೆ ಅನುಕೂಲವಾಗುವಂತೆ ಸಹಾಯ ಮಾಡುವುದೇ ಸಹಾನುಭೂತಿಯುಳ್ಳ ಸದಸ್ಯರ ಕೆಲಸವು. ಈ ದೃಷ್ಟಿಯಿಂದ ಪಕ್ಷಕ್ಕೆ ಸ್ವತಃ ತಾವು ಹಣ ಕೊಡುವುದು, ಜನತೆಯಿಂದ ಈ ಕಾರ್ಯಕ್ಕೆ ಧನಸಂಗ್ರಹ ಮಾಡುವುದು, ಕಾರ್ಯಶೀಲ ಸದಸ್ಯರಿಗೋಸ್ಕರ ಆಶ್ರಯಸ್ಥಾನಗಳ ವ್ಯವಸ್ಥೆಯನ್ನು ಮಾಡುವುದು, ಮತ್ತು ಪಕ್ಷದ ಪ್ರಚಾರ ಮಾಡುವುದು ಇವೇ ಮೊದಲಾದವುಗಳು ಸಹಾನುಭೂತಿಯುಳ್ಳ ಸದಸ್ಯರು ಮಾಡಬೇಕಾದ ಕೆಲಸಗಳಾಗಿದ್ದವು.

ಈ ರೀತಿ ಸದಸ್ಯರ ಕಾರ್ಯದ ವ್ಯವಸ್ಥೆಯನ್ನು ಮಾಡಿದ ನಂತರ ದೇಶದಲ್ಲಿಯ ಕ್ರಾಂತಿಕಾರಿಗಳನ್ನೆಲ್ಲ ಒಂದು ಸೂತ್ರಬದ್ಧ ಸಂಘಟನೆಯಲ್ಲಿ ಸೇರಿಸುವುದಕ್ಕೋಸ್ಕರ ಮತ್ತು ಮುಂದೆ ಕಾರ್ಯಕ್ಕೆ ಯೋಗ್ಯ ಮಾರ್ಗದರ್ಶನಮಾಡುವುದಕ್ಕೋಸ್ಕರ ಒಂದು ಕೇಂದ್ರ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯಲ್ಲಿ ಯುಕ್ತ ಪ್ರಾಂತ, ಪಂಜಾಬ, ಬಿಹಾರಗಳ ಇಬ್ಬಿಬ್ಬರು ಪ್ರತಿನಿಧಿಗಳೂ ಮತ್ತು ರಾಜಪುತಾನಾದ ಒಬ್ಬ ಪ್ರತಿನಿಧಿಯೂ ಇದ್ದರು. ಪ್ರಾಂತ ಪ್ರಾಂತಗಳಲ್ಲಿಯ ಸಂಬಂಧವನ್ನು ವ್ಯವಸ್ಥಿತವಾಗಿ ಇಟ್ಟುಕೊಂಡು ಕೇಂದ್ರಕ್ಕೂ ಪ್ರಾಂತಗಳಿಗೂ ಸೂತ್ರಬದ್ಧ ಸಂಬಂಧವನ್ನಿಡುವ ಕೆಲಸವನ್ನು ವಿಜಯಕುಮಾರಸಿಂಹನಿಗೆ ಒಪ್ಪಿಸಲಾಯಿತು. ಕೇಂದ್ರ ಸಮಿತಿಯ ರಾಜಪುತಾನಾದ ಪ್ರತಿನಿಧಿಯ ನಾಯಕತ್ವದಲ್ಲಿ ಪಕ್ಷದ ಕೇಂದ್ರ ಕಚೇರಿಯನ್ನು ಝಾಂಸಿಯಲ್ಲಿ ಸ್ಥಾಪಿಸಲಾಯಿತು. ಚಂದ್ರಶೇಖರ ಆಜಾದನನ್ನು ಸೇನಾವಿಭಾಗದ ಪ್ರಮುಖನನ್ನಾಗಿ ನಿಯುಕ್ತಿ ಮಾಡಲಾಯಿತು, ಸೇನಾವಿಭಾಗದ ಒಬ್ಬ ನಾಯಕನೂ

ಪ್ರಭಾವಶಾಲಿ ಪ್ರಚಾರಕನೂ ಆದ ಭಗತ್‌ಸಿಂಗನ ಸ್ಥಾನವು ಪಕ್ಷದಲ್ಲಿ ಅಸಾಮಾನ್ಯವಾಯಿತು.

ಈ ಸಭೆಯಲ್ಲಿ ಇನ್ನೊಂದು ಅತ್ಯಂತ ಮಹತ್ವದ ನಿರ್ಣಯವನ್ನು ಅಂಗೀಕರಿಸಲಾಯಿತು. ಸೇನಾವಿಭಾಗದ ಸದಸ್ಯರೆಲ್ಲರೂ ಮನೆಯೊಡನೆ ಇದ್ದ ತಮ್ಮ ತಮ್ಮ ಸಂಬಂಧಗಳನ್ನು ಕಡಿದೊಗೆದು ಮನೆಯಿಂದ ಹೊರಬೀಳಬೇಕು ಮತ್ತು ತಮ್ಮ ಸಂಪೂರ್ಣ ಜೀವನವನ್ನು ಅಂಗೀಕೃತ ಕಾರ್ಯಕ್ಕಾಗಿಯೇ ಮುಡಿಪಿಡಬೇಕೆಂಬುದೇ ಆ ನಿರ್ಣಯವು. ತಮ್ಮ ತಮ್ಮ ಮನೆಗಳಲ್ಲಿಯೇ ಇದ್ದುಕೊಂಡು, ಇಲ್ಲವೆ ಬೇರೆ ಏನಾದರೂ ಕೆಲಸ ಮಾಡಿಕೊಂಡು ಉಳಿದ ಸಮಯದಲ್ಲಿ ಎಷ್ಟೇ ಪ್ರಾಮಾಣಿಕತನದಿಂದ ಮತ್ತು ದೇಶಹಿತ ಬುದ್ಧಿಯಿಂದ ಕಾರ್ಯ ಮಾಡಿದರೂ ನಿರೀಕ್ಷಿಸಿದ ಫಲವು ದೊರೆಯಲಾರದು ಮತ್ತು ಧ್ಯೇಯಸಾಧನೆಯಾಗಲಾರದು ಎಂದು ಮನವರಿಕೆಯಾದ ನಂತರವೇ ಈ ನಿರ್ಣಯದ ಅಂಗೀಕಾರವಾಯಿತು. ಸಶಸ್ತ್ರ ಕ್ರಾಂತಿಯಿಂದ ಭಾರತಮಾತೆಯ ಬಂಧವಿಮೋಚನೆಯನ್ನು ಮಾಡುವುದೇ ಈ ಯುವಕರು ಅಂಗೀಕರಿಸಿದ ಧ್ಯೇಯವಾಗಿತ್ತು. ಅದಕ್ಕನುಸರಿಸಿ ಅನೇಕಾನೇಕ ನರವೀರರನ್ನು ನಿರ್ಮಿಸುವುದು ಆವಶ್ಯಕವಾಗಿತ್ತು. ಮಾತೆಯ ಮುಕ್ತಿಗಾಗಿ ಸಂದರ್ಭ ಬಂದರೆ ಸರ್ವಸ್ವವನ್ನು ಅರ್ಪಿಸಲು ಸಿದ್ಧರಾಗುವ ಯುವಕರನ್ನು ಒಂದುಗೂಡಿಸಬೇಕಾಗಿತ್ತು. ಯುವಕರಲ್ಲಿ ಈ ರೀತಿಯ ಜ್ವಲಂತ ದೇಶಭಕ್ತಿಯನ್ನೂ ಉತ್ಕಟ ಧ್ಯೇಯನಿಷ್ಠೆಯನ್ನೂ ಉಂಟುಮಾಡುವುದು ಆ ರೀತಿ ಸ್ವಂತ ನಡತೆಯಿದ್ದವರಿಂದ ಮಾತ್ರ ಸಾಧ್ಯ. ಸ್ವಂತ ಅಂತಃಕರಣದಲ್ಲಿ ದೇಶಭಕ್ತಿಯ ನಂದಾದೀಪವನ್ನು ಪ್ರಖರವಾಗಿ ಬೆಳಗುತ್ತಲಿಟ್ಟವನೇ ತನ್ನ ಸಹವಾಸದಲ್ಲಿ ಬಂದವರ ಅಂತರಂಗದಲ್ಲಿಯೂ ದೇಶಭಕ್ತಿಯ ಜ್ಯೋತಿಯನ್ನು ಪ್ರಜ್ವಲಿಸಬಲ್ಲನು. ಸ್ವೋದಾಹರಣೆಯಿಂದಲೇ ಲೋಕಶಿಕ್ಷಣವನ್ನು ಕೊಡಬೇಕಾಗುತ್ತದೆ. ಆದ್ದರಿಂದ ತಮ್ಮದೆಲ್ಲವನ್ನೂ ಮಾತೆಯ ಅಡಿಯಲ್ಲಿ ಅರ್ಪಿಸಿದವರೇ ದೇಶಕ್ಕಾಗಿ ಸರ್ವಸ್ವಾರ್ಪಣದ ಬುದ್ಧಿಯನ್ನು ಇತರರಲ್ಲಿ ಜಾಗ್ರತಗೊಳಿಸಬಲ್ಲರು. ಈ ಸರ್ವಸ್ವಾರ್ಪಣಬುದ್ಧಿಯಿಂದ ಮನೆ—ಮಠಗಳನ್ನೂ, ಆಸೆ—ಮೋಹಗಳನ್ನೂ ತ್ಯಜಿಸಿದ ಯುವಕರಲ್ಲಿ ತಮ್ಮವರ ಬಗ್ಗೆ ಸ್ನೇಹ ಇರುವುದಿಲ್ಲವೆಂತಲ್ಲ ...ನೆಯುವರನ್ನು

ತಿರಸ್ಕರಿಸಿ ಅವರು ಹೊರಗೆ ಬಂದಿರುವದಿಲ್ಲ. ಅವರ ಸ್ನೇಹದ ಕ್ಷೇತ್ರವು ಮಾತ್ರ ಮನೆಯ ನಾಲ್ಕು ಗೋಡೆಗಳಾಚೆಗೆ ಹೋಗಿ ವಿಸ್ತಾರಗೊಳ್ಳುತ್ತ ಸಂಪೂರ್ಣ ದೇಶವನ್ನು ವ್ಯಾಪಿಸಿರುತ್ತದೆ. ಅವರ ಅಂತರಾತ್ಮವು ವಿಕಾಸಗೊಳ್ಳುತ್ತ ರಾಷ್ಟ್ರಾತ್ಮನಲ್ಲಿ ಲೀನವಾಗಿರುತ್ತದೆ. ಸಂಪೂರ್ಣ ವಿಕಸಿತವಾದ ಅವರ ಜೀವನಪುಷ್ಪವು ಮಾತೆಯ ಅಡಿಯಲ್ಲಿ ಅರ್ಪಿತವಾಗಿರುತ್ತದೆ. ಪರಮಾತ್ಮನಿಗೆ ಅರ್ಪಿಸಬೇಕಾದ ಹೂವು ಪೂರ್ಣ ಅರಳಿರಬೇಕು. ಅದನ್ನು ಅನ್ಯರಾರೂ ಮೂಸಿನೋಡದೆ ದೇವರಿಗೋಸ್ಕರ ಮುಡಿಪಿಟ್ಟಿರಬೇಕು. ಬಾಡಿಪ ಕದಡಿದ, ಮೂಸಿ ನೋಡಿದ, ಇಲ್ಲವೆ ನೆಲದ ಮೇಲೆ ಬಿದ್ದ ಹೂವು ಆ ಪ್ರಭುವಿನ ಪೂಜೆಗೆ ಅರ್ಹವಾಗುವುದಿಲ್ಲ. ಸಂಪೂರ್ಣವಾಗಿ ಅರಳಿದ ಈ ಸಹಸ್ರ ದಳದ ಜೀವನ ಕಮಲವನ್ನು ಸ್ವಂತ ಕೈಯಿಂದ ಮಾತೃಭೂಮಿಯ ಪಾದದಲ್ಲಿ ಅರ್ಪಿಸಿದವರೇ ಲೋಕದಲ್ಲಿ ಧನ್ಯರು! ಅವರೇ ಮಾತೆಯ ಪೂಜೆಯನ್ನು ಕಟ್ಟಬಲ್ಲರು, ನವಯುಗವನ್ನು ನಿರ್ಮಿಸಬಲ್ಲರು, ದೇಶದಾದ್ಯಂತವೂ ದೇಶಭಕ್ತಿಯ ಪ್ರಬಲ ಪ್ರವಾಹವನ್ನು ಪ್ರವಹಿಸಬಲ್ಲರು. ಈ ವಿಚಾರಸರಣಿಯಿಂದ ಪ್ರೇರಿತರಾಗಿಯೇ ಭಗತ್‌ಸಿಂಗ ಮೊದಲಾದವರು ತಮ್ಮ ಪಕ್ಷದ ಎಲ್ಲಾ ಕಾರ್ಯಶೀಲ ಸದಸ್ಯರು ಕಾರ್ಯಾರ್ಥವಾಗಿಯೇ ಜೀವನವನ್ನು ವೆಚ್ಚ ಮಾಡಬೇಕು. ಮತ್ತು ಪಕ್ಷದ ಆಜ್ಞೆಯಾದಾಗ ಸರ್ವಸ್ವಾರ್ಪಣಕ್ಕೂ ಸಿದ್ಧರಿರಬೇಕೆಂಬ ಉದ್ದೇಶದಿಂದ ಎಲ್ಲರೂ ಮನೆಯಿಂದ ಹೊರಬಿದ್ದು ಪಕ್ಷದ ಕಾರ್ಯಕ್ಕೆ ಪ್ರವೃತ್ತರಾಗಬೇಕೆಂಬ ನಿರ್ಣಯವನ್ನು ಅಂಗೀಕರಿಸಿದರು.

ಸ್ವಲ್ಪೇ ದಿವಸಗಳಲ್ಲಿ ಝಾಂಸಿಯಲ್ಲಿಯ ಕೇಂದ್ರ ಕಾರ್ಯವನ್ನು ಆಗ್ರಾಕ್ಕೆ ಸ್ಥಳಾಂತರಿಸಲಾಯಿತು. ಅಲ್ಲಿ ಎರಡು ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡಿದ್ದರು. ತಮ್ಮ ಮನೆಯನ್ನೂ ಬಂಧುಗಳನ್ನೂ ಬಿಟ್ಟು ಬಂದ ಯುವಕರನೇಕರು ಈ ಮನೆಗಳಲ್ಲಿಯೇ ವಾಸವಾಗಿದ್ದರು. ಅವರು ಅಲ್ಲಿ ಅತ್ಯಂತ ಬಡತನದ ಬಾಳ್ವೆಯನ್ನು ಬಾಳಬೇಕಾಯಿತು. ಯಾಕೆಂದರೆ ಆಗಿನ ಕಾಲದಲ್ಲಿ ಇವರ ಕ್ರಾಂತಿಪಕ್ಷಕ್ಕೆ ಯಾವಾಗಲೂ ಹಣದ ಕೊರತೆಯೇ ಇರುತ್ತಿತ್ತು. ಒಂದು ಬಾರಿಯಂತೂ ಇಡೀ ಮೂರು ದಿನಗಳವರೆಗೆ ಒಂದು ಲೋಟ ಚಹದ ಹೊರ್ತು ಬೇರೆ ಏನೂ ತಿನ್ನಲಿಕ್ಕೆ ಹೊರೆಯದೆ ಹೋಯಿತು! ಆಗ್ರಾದ

ಉಗ್ರ ಚಳಿಗಾಲವನ್ನೂ ೮–೯ ಜನರ ನಡುವೆ ಇದ್ದ ೨–೩ ಕಂಬಳಿಗಳನ್ನು ಹೊದ್ದುಕೊಂಡೇ ಕಳೆಯಬೇಕಾಯಿತು. ಹಾಸಲಿಕ್ಕಂತೂ ಏನೂ ಇರಲೇ ಇಲ್ಲ. ಸಾರಾಂಶ ಅವರ ವಾಸಸ್ಥಾನವೆಂದರೆ ಮೂರ್ತಿಮಂತ ದಾರಿದ್ರ್ಯದ ತವರುಮನೆಯಾಗಿತ್ತೆಂದು ಹೇಳಬಹುದು. ಆದರೂ ಆ ಯುವಕರು ಇದೆಲ್ಲ ವನ್ನು ಸಂತೋಷದಿಂದ ಸಹಿಸಿದರು. ಧ್ಯೇಯ ಚಿಂತನೆಯಲ್ಲಿ ಮಗ್ನವಾದ ಅವರ ಮನಸ್ಸಿಗೆ ದೇಹದ ಸುಖದುಃಖಗಳ ಯೋಚನೆಮಾಡಲು ಅವಕಾಶವೇ ಇರಲಿಲ್ಲವೇನೊ! ಹೃದಯದಲ್ಲಿಯ ಕಿಚ್ಚು ಅವರನ್ನು ಆ ಕೊರೆಯುವ ಚಳಿ ಯಿಂದಲೂ ಸಂರಕ್ಷಿಸಲು ಸಮರ್ಥವಾಗಿತ್ತೆಂದು ತೋರುತ್ತದೆ

'ಶಯ್ಯಾ ಭೂಮಿತಲಂ ದಿಶೋಽಪಿ ವಸನಂ ಜ್ಞಾನಾಮೃತಂ ಭೋಜನಮ್ ।
ಏತೇ ಯಸ್ಯ ಬಾಂಧವ ಜನೋ ಽದ ಸರ್ವೇ ಕಸ್ಮಾದ್ಭಯಂ ಯೋಗಿನಃ ॥

ಎಂಬಂತೆ ಹಿಂದುಭೂಮಿಯ ಆ ಯೋಗಿಗಳು ದೇಶಸೇವೆಯ ಕಾರ್ಯವನ್ನು ಮುಂದುವರಿಸಿದರು.

ಜ್ಞಾನಾಮೃತದ ಬಯಕೆ ಭಗತ್‌ಸಿಂಗನಲ್ಲಿ ಅತಿಶಯವಾಗಿತ್ತು. ಅಭ್ಯಾಸದಲ್ಲಿ ದಿನದಿನಕ್ಕೆ ಹೆಚ್ಚುವ ಅಭಿರುಚಿಯ ಮೂಲಕ ಆವನು ಆಗ್ರಾದಲ್ಲಿ ವಾಚನಾಲಯವೊಂದನ್ನು ಸ್ಥಾಪಿಸುವ ಉದ್ಯೋಗವನ್ನಾರಂಭಿ ಸಿದನು ಅದಕ್ಕಾಗಿ ಸಹಾನುಭೂತಿಯುಳ್ಳ ಸದಸ್ಯರ ಹತ್ತಿರ ಮತ್ತು ಬೇರೆ ಜನರ ಹತ್ತಿರ ಪುಸ್ತಕಗಳ ಭಿಕ್ಷೆಯನ್ನು ಬೇಡುತ್ತ ಆವನು ತಿರಿತಿರಿ ತಿರುಗಿದನು. ಅಲ್ಪಾವಧಿಯಲ್ಲಿಯೇ ಚಿಕ್ಕದಾದರೂ ಮಹತ್ವದ ಪುಸ್ತಕಗಳ ಸಂಗ್ರಹವೊಂದು ಅಲ್ಲಿ ಆಯಿತು. ಅದರಲ್ಲಿ ಮಹತ್ವದ ಭಾಗವೆಂದರೆ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳದು. ಸಮಾಜವಾದದ ವಿಷಯವಾಗಿ ಭಗತ್‌ಸಿಂಗನ ಅಭ್ಯಾಸವೂ ಚರ್ಚೆಯೂ ಬರಬರುತ್ತ ಹೆಚ್ಚುತ್ತಲೇ ಹೋದವು. ವಿಶಾಲ ಮತ್ತು ಆಳವಾದ ಅಭ್ಯಾಸದಲ್ಲಿ ಅವನನ್ನು ಸ್ಪರ್ಧಿಸುವವರು ಇಡೀ ಪಕ್ಷದಲ್ಲಿ ಒಬ್ಬರೂ ಇರಲಿಲ್ಲ. ಅವನು ತಾನು ಓದಿದ ಪುಸ್ತಕಗಳಲ್ಲಿಯ ಮಹತ್ವದ ಮತ್ತು ಉತ್ಕೃಷ್ಟ ಪರಿಚ್ಛೇದಗಳನ್ನು ಕಂಠಗತ ಮಾಡುತ್ತಿದ್ದನು. ಅವನ ಈ ಪದ್ಧತಿಯಿಂದ ಮುಂದೆ ತುಂಬ ಪ್ರಯೋಜನವಾಯಿತು. ಲಾಹೋರ ಒಳಸಂಚಿನ ಮೊಕದ್ದಮೆ ನಡೆಯುತ್ತಿ ದ್ದಾಗ ತನಗೆ ಜ್ಞಾಪಕವಿದ್ದ ಉತ್ತಮ ಪರಿಚ್ಛೇದಗಳನ್ನು ಹೇಳಿ ಅವನು

ಗೆಳೆಯರೆಲ್ಲರಿಗೆ ಉತ್ಸಾಹವನ್ನೂ ನವಚೈತನ್ಯವನ್ನೂ ಕೊಡುತ್ತಿದ್ದನು. ಈ ರೀತಿ ಈ ಜ್ಞಾನಾಮೃತದ ಭೋಜನವು ಅವನ ಹಾಗೂ ಅವನ ಸಹಕಾರಿಗಳ ಜೀವನದ ಕಠಿಣ ಮತ್ತು ದುಃಖದ ಸಮಯದಲ್ಲಿ ಅವರಿಗೆ ಸಂತೋಷವನ್ನೂ ಸ್ಫೂರ್ತಿಯನ್ನೂ ಕೊಡುತ್ತಿತ್ತು.

## ಸ್ಯಾಂಡರ್ಸನ ಕೊಲೆ

ಬ್ರಿಟಿಷರು ಭಾರತಕ್ಕೆ ಕ್ರಮಶಃ ರಾಜಕೀಯ ಅಧಿಕಾರಗಳನ್ನು ಕೊಡುತ್ತ ಕೊನೆಗೆ ಸಂಪೂರ್ಣ ಸ್ವಾತಂತ್ರ್ಯವನ್ನು ದಾನ ಮಾಡುವುದಾಗಿ ೧೯೨೭ ರಲ್ಲಿ ಘೋಷಣೆ ಮಾಡಿದರು. ಅದಕ್ಕನುಸರಿಸಿ ಸುಧಾರಣೆಯ ಮೊದಲನೆಯ ಕಂತು ೧೯೧೯ ರ ಮಾಂಟೆಗ್ಯೂ-ಚೆಮ್ಸಫರ್ಡ್ ಸುಧಾರಣೆ ಕಾನೂನಿನ ರೂಪದಲ್ಲಿ ದೊರೆಯಿತು. ಎರಡನೆಯ ಕಂತನ್ನು ಕೊಡುವ ಮೊದಲು ಭಾರತದ ಪರಿಸ್ಥಿತಿಯನ್ನು ಪ್ರತ್ಯಕ್ಷ ಪರಿಶೀಲಿಸಿ ಅಲ್ಲಿಯ ಜನತೆಯ ವಿಚಾರಗಳನ್ನರಿತುಕೊಂಡು ಯಾವ ರೀತಿಯ ರಾಜಕೀಯ ಸುಧಾರಣೆಗಳನ್ನು ಕೊಡಬೇಕೆಂಬ ವಿಷಯ ಪಾರ್ಲಿಮೆಂಟಿಗೆ ಸಲಹೆ ಮಾಡಲು ಸಾಯಮನ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯೋಜಿಸಲಾಯಿತು. ಇದಕ್ಕೆ 'ಸಾಯಮನ್ ಕಮಿಷನ್' ಎಂಬ ಹೆಸರು ಬಳಕೆಯಲ್ಲಿ ಬಂದಿದೆ. ಈ ಸಮಿತಿಯ ಸದಸ್ಯರಲ್ಲಿ ಭಾರತೀಯರೊಬ್ಬರೂ ಇರಲಿಲ್ಲ. ಇದರಿಂದಾಗಿ ಭಾರತೀಯರಿಗೆಲ್ಲ ಈ ಸಮಿತಿಯ ಬಗ್ಗೆ ಅವಿಶ್ವಾಸವೂ ಆದರ ನೇಮಕದಬಗ್ಗೆ ತಿರಸ್ಕಾರವೂ ಉದ್ವೇಗವೂ ಉಂಟಾದವು. ರಾಷ್ಟ್ರೀಯ ಮಹಾಸಭೆಯನ್ನೊಳಗೊಂಡು ಎಲ್ಲ ಪಕ್ಷಸಂಗಡಗಳು ಈ ಸಮಿತಿಯ ಮೇಲೆ ಬಹಿಷ್ಕಾರ ಹಾಕುವ ನಿರ್ಣಯ ಮಾಡಿದವು. ಅದಕ್ಕನುಸರಿಸಿ ಭಾರತದ ಯಾವ ನಗರದಲ್ಲಿ ಸಮಿತಿಯು ಆಗಮಿಸುತ್ತಿತ್ತೋ ಅಲ್ಲಿಯ ಯಾವತ್ತು ಜನತೆಯು ತನ್ನ ಮುಖಂಡರ ನಾಯಕತ್ವದಲ್ಲಿ ಕಪ್ಪು ಬಾವುಟಗಳೊಂದಿಗೆ ಮೆರವಣಿಗೆ ಹೊರಡಿಸಿ ನಿಷೇಧ ಪ್ರದರ್ಶನ ಮಾಡುತ್ತಿತ್ತು. 'Siman go back'—'ಸಾಯಮನ್ನರೆ, ಹಿಂದಿರುಗಿ' ಎಂದು ಘೋಷಣೆ ಮಾಡಿ ಜನಗಳು ಸಮಿತಿಗೆ ತಮ್ಮ ಬಹಿಷ್ಕಾರವನ್ನೂ ಧಿಕ್ಕಾರವನ್ನೂ ಪ್ರಕಟಿಸುತ್ತಿದ್ದರು. ಆಹೊತ್ತು ಹರತಾಳವು ಆಚರಿ

ಸಲ್ಪಡುತ್ತಿತ್ತು. ಈರೀತಿ ಅನೇಕ ಕಡೆಗೆ ಬಹಿಷ್ಕಾರದ ಕಾರ್ಯಕ್ರಮವು ನಡೆಯಿತು.

ಸಾಯಮನ್ ಸಮಿತಿಯು ೨೦-೧೦-೧೯೨೮ ನೆಯ ತಾರೀಖಿನಿಂದು ಲಾಹೋರ ನಗರಕ್ಕೆ ಆಗಮಿಸಿತು. ಪಂಜಾಬ ಕೇಸರಿಯಾದ ಶ್ರೀ. ಲಾಲಾ ಲಜಪತರಾಯರು ಸಮಿತಿಗೆ ಧಿಕ್ಕಾರವನ್ನು ಜಾಹೀರಪಡಿಸುವುದಕ್ಕಾಗಿ ಮಹಾನ್ ಮೆರವಣಿಗೆಯ ಸಿದ್ಧತೆಯನ್ನು ಮಾಡಿದ್ದರು. ಜನತೆಯಾದರೂ ಅತ್ಯಂತ ಉತ್ಸಾಹದಿಂದ ಮೆರವಣಿಗೆಯಲ್ಲಿ ಭಾಗ ವಹಿಸಲು ಸಿದ್ಧವಾಯಿತು. ಈ ಪ್ರಕಾರದ ಪ್ರದರ್ಶನವನ್ನು ತಡೆಯಲಿಕ್ಕೆಂದು ಸರಕಾರದವರು ೧೪೪ ನೇ ಕಲಮನ್ನು ಜಾರಿಮಾಡಿ ಮೆರವಣಿಗೆ ಮೊದಲಾದವುಗಳ ಮೇಲೆ ನಿಷೇಧಾಜ್ಞೆಯನ್ನು ಪ್ರಯೋಗಿಸಿದರು. ಆದರೆ ಪ್ರಯೋಜನವಾಗಲಿಲ್ಲ. ಲಾಲಾಜಿಯವರ ಹಿರಿತನದಲ್ಲಿ ದೊಡ್ಡದೊಂದು ಮೆರವಣಿಗೆಯು ಹೊರಟಿತು. ರೊಚ್ಚಿಗೆದ್ದ ಪೋಲೀಸು ಅಧಿಕಾರಿಗಳು ಮೆರವಣಿಗೆಯ ಮೇಲೆ ಕ್ರೂರತನದಿಂದ ಲಾಠಿ ಪ್ರಹಾರವನ್ನು ಮಾಡಿದರು. ಸ್ವತಃ ಪೋಲೀಸು ಸುಪರಿಂಟೆಂಡೆಂಟ್ ಸ್ಕಾಟ್‌ನು ನಿರ್ದಯತನದಿಂದ ಲಾಲಾಜಿಯವರಿಗೆ ಲಾಠಿಯ ಏಟುಗಳನ್ನು ಕೊಟ್ಟನು. ಲಾಲಾಜಿಯವರಾದರೂ ಹಿಮ್ಮೆಟ್ಟದೆ ಲಾಠಿಯ ಏಟಿಗೆ ಮುಂದಾಗಿ ಎದೆಯೊಡ್ಡಿದರು. ಈ ಹೊಡೆತದಿಂದ ಲಾಲಾಜಿಯವರು ಜ್ವರ ಬಂದು ಮಲಗಿದರು. ಮುಂದೆ ೧೭—೧೧—೨೮ ರಂದು ಶ್ರೀ. ಲಜಪತರಾಯರು ಈ ಕಾಹಿಲೆಯಲ್ಲಿಯೇ ತೀರಿಕೊಂಡರು. ದೇಶದಲ್ಲೆಲ್ಲ ಹಾಹಾಕಾರವೆದ್ದಿತು. ಪೋಲೀಸು ಸುಪರಿಂಟೆಂಡೆಂಟ್ ಸ್ಕಾಟ್‌ನ ಹೊಡೆತದಿಂದಲೇ ಲಾಲಾಜಿಯವರು ಮರಣ ಹೊಂದಿದರೆಂಬ ನಂಬಿಗೆಯು ಜನತೆಯಲ್ಲಿ ದೃಢವಾಯಿತು. ಭಗತ್‌ಸಿಂಗ ಮೊದಲಾದ ಯುವಕ ಕ್ರಾಂತಿಕಾರಿಗಳ ನೆತ್ತರವಂತೂ ತ್ವೇಷದಿಂದ ಕುದಿಯಹತ್ತಿತು. ಲಾಲಾಜಿಯವರ ಅಂತ್ಯ ಸಂಸ್ಕಾರವಾದ ನಂತರ ಅವರಿಗೆ ಬಾಷ್ಪಾಂಜಲಿಯನ್ನರ್ಪಿಸುತ್ತ ಒಬ್ಬ ವಿಖ್ಯಾತ ಸ್ತ್ರೀವಾಗ್ಮಿಯು ಈ ರೀತಿ ಸವಾಲ್ ಹಾಕಿದಳು: "ಲಜಪತರಾಯರನ್ನು ಕೊಂದವನು ಇನ್ನೂ ತಲೆಯೆತ್ತಿ ಮೆರೆಯುತ್ತಿದ್ದಾನೆ. ಭಾರತದಲ್ಲಿಯ ಯುವಕರು ಕೈಯಲ್ಲಿ ಬಳೆ ಇಟ್ಟಿದ್ದಾರೆಯೆ? ಭಾರತವು ನಿರ್ವೀರ್ಯವಾಯಿತೆ?"

ಶೀಘ್ರವೇ ಕ್ರಾಂತಿಕಾರಿಗಳ ಸಭೆಯೊಂದು ಸೇರಿತು. ಲಾಲಾ ಲಜ

ಪತರಾಯರನ್ನು ಹೊಡೆದ ಸ್ಕಾಟ್‌ನ ಇಹಲೋಕ ಯಾತ್ರೆಯನ್ನು ಮುಗಿಸಿ ಲಾಲಾಜಿಯವರ ರಕ್ತದ ಸೇಡನ್ನು ತೀರಿಸಿಕೊಳ್ಳಲು ಎಲ್ಲರೂ ಅತ್ಯುತ್ಸುಕರಾಗಿದ್ದರು. ಲಾಲಾ ಲಜಪತರಾಯರಂತಹ ನಾಯಕರನ್ನು ಮದಾಂಧರಾದ ಅಧಿಕಾರಿಗಳು ಹೊಡೆದುದನ್ನು ಭಾರತವು ಸಹಿಸಲಿಲ್ಲ. ಜನತೆಯ ಮುಂದಾಳುಗಳಿಗೆ ಹಿಂಸೆ ಕೊಟ್ಟ ಅಧಿಕಾರಿಗಳು ಭಾರತದಲ್ಲಿ ಜೀವದಿಂದುಳಿಯುವುದು ಸಾಧ್ಯವಿಲ್ಲವೆಂಬುದನ್ನು ಇಡಿ ವಿಶ್ವಕ್ಕೆ ಸಾರಿ ಹೇಳುವುದು ತಮ್ಮ ಪವಿತ್ರ ಕರ್ತವ್ಯವೆಂದು ಅವರು ಭಾವಿಸಿದರು. ಭಾರತವು ನಿರ್ವೀರ್ಯವಾಗಿಲ್ಲ; ರಾಜ್ಯಮದದಿಂದ ಕೊಬ್ಬಿದ ಅಧಿಕಾರಿಗಳನ್ನೆದುರಿಸಲು ಸಮರ್ಥವಾದ ಬಿಸಿ ನೆತ್ತರದ ಯುವಕರ ತಂಡವೊಂದು ಇಲ್ಲಿ ಸಿದ್ಧವಾಗಿದೆಯೆಂಬ ವಿಷಯ ಸರಕಾರಕ್ಕೆ ಎಚ್ಚರಿಕೆಯನ್ನು ಕೊಡುವದವಶ್ಯವೆಂದು ಅವರು ಎಣಿಸಿದರು ಪ್ರಸಂಗ ಬಿದ್ದರೆ ರಕ್ತವನ್ನರ್ಪಿಸಿಯಾದರೂ ಭಾರತಮಾತೆಯ ಸೇವೆಗೈಯಲು ಸಿದ್ಧವಾಗಿರುವ ಉಜ್ವಲ ದೇಶಭಕ್ತರು ಜೀವಂತವಾಗಿದ್ದಾರೆಂಬುದನು ಲೋಕದ ನಿದರ್ಶನಕ್ಕೆ ತರುವುದವಶ್ಯಕವಿತ್ತು. ಯಾವನೊಬ್ಬ ದುಷ್ಟನು ಎದ್ದು ತನ್ನ ಪಾಶವೀ ಶಕ್ತಿಯ ಬಲದಿಂದ ಭಾರತಮಾತೆಯ ಮೇಲೆ ಕ್ರೂರ ಕೈಯನ್ನೆತ್ತಿದರೆ ಆ ಕೈಯನ್ನೇ ಕತ್ತರಿಸಿ ಆ ದುಷ್ಟನನ್ನು ತುಂಡರಿಸುವ ಪ್ರತ್ಯಾಘಾತದ ಶಕ್ತಿಯು ಆಕೆಯ ಪುತ್ರರಲ್ಲಿದೆ ಎಂಬುದನ್ನು ಪ್ರತ್ಯಕ್ಷ ಕೃತಿಯಿಂದ ಪ್ರಪಂಚದ ಗಮನಕ್ಕೆ ತರುವುದು ತಮ್ಮ ಹೊಣೆಯೆಂದು ಈ ಕ್ರಾಂತಿಕಾರಿಗಳು ತಿಳಿದುಕೊಂಡರು. ಮತ್ತು ಈ ಹೊಣೆಯನ್ನು ನಿರ್ವಹಿಸುವ ಯೋಜನೆಯನ್ನು ಅವರು ಸಿದ್ಧಗೊಳಿಸಿದರು.

ಅನೇಕ ಭಯೋತ್ಪಾದಕ ವಿಪ್ಲವಕಾರಿ ಯೋಜನೆಗಳಲ್ಲಿ ಪ್ರತ್ಯಕ್ಷ ಭಾಗ ವಹಿಸಿದ ಸೇನಾಪತಿ ಆಜಾದನ ಮಾರ್ಗದರ್ಶನದಲ್ಲಿ ಈ ಯೋಜನೆಯು ಸಿದ್ಧವಾಯಿತು. ' ಸ್ಕಾಟ್ 'ನ ಕೊಲೆಯನ್ನು ಸಾಧಿಸುವುದಕ್ಕಾಗಿ ನಾಲ್ವರಿಗೆ ಕೆಲಸವನ್ನು ವಿಭಾಗಿಸಿ ಕೊಡಲಾಯಿತು. ಸುಖದೇವನು ಪ್ರತಿದಿವಸ ಪೋಲಿಸು ಕಚೇರಿಗೆ ಹೋಗಿ ಸ್ಕಾಟ್‌ನನ್ನು ಚೆನ್ನಾಗಿ ಗುರುತಿಸಬೇಕು ಮತ್ತು ಅವನ ಚಲನವಲನಗಳನ್ನೆಲ್ಲ ತಿಳಿದುಕೊಳ್ಳಬೇಕೆಂದು ಗೊತ್ತಾಯಿತು. ಲಜಪತರಾಯರ ಪ್ರಥಮ ಮಾಸಿಕ ಶ್ರಾದ್ಧದ ದಿವಸ ಅಂದರೆ ದಿ. ೧೭—೧೨—೨೮ ರಂದು ಈ ಕೃತ್ಯವನ್ನು ಸಾಧಿಸಬೇಕೆಂದು ನಿರ್ಣಯವಾಯಿತು. ಆಹೊತ್ತಿನ

ದಿವಸ ಶಿವರಾಮ ರಾಜಗುರು ಮತ್ತು ಭಗತ್‌ಸಿಂಗ ಇಬ್ಬರೂ ಸೇರಿ ಸ್ಕಾಟ್‌ನನ್ನು ಕೊಲೆ ಮಾಡಬೇಕು. ಮತ್ತು ಕೊಲೆಯ ಕೃತ್ಯವು ನಡೆಯುತ್ತಿದ್ದಾಗ ಯಾರಾದರೂ ಆತಂಕವನ್ನುಂಟು ಮಾಡಿದರೆ ಅವರ ಸಮಾಚಾರ ತಕ್ಕೊಂಡು ರಾಜಗುರು ಭಗತ್‌ಸಿಂಗರ ರಕ್ಷಣೆಯನ್ನು ಚಂದ್ರಶೇಖರ ಆಜಾದನು ಮಾಡಬೇಕೆಂದು ನಿಶ್ಚಯಿಸಲಾಯಿತು. ಕೊಲೆ ಯಾರು ಮಾಡಿದರೆಂಬುದರ ಪತ್ತೆಯೇ ಆಗದಂತೆ ಎಲ್ಲರೂ ಕೌಶಲ್ಯದಿಂದ ಜಾರಿ ಹೋಗುವ ಯೋಜನೆಯನ್ನೂ ಮಾಡಲಾಯಿತು

ಮರು ದಿವಸದಿಂದ ಸುಖದೇವನು ತನ್ನ ಕೆಲಸವನ್ನಾರಂಭಿಸಿದನು. ಆದರೆ ಆರಂಭದಲ್ಲಿಯೇ ಅವನಿಂದ ಒಂದು ತಪ್ಪು ಸಂಭವಿಸಿತು. ಅಸಿಸ್ಟಂಟ್ ಪೋಲೀಸು ಸುಪರಿಂಟೆಂಡೆಂಟ್‌ನಾದ ಸ್ಯಾಂಡರ್ಸನನ್ನೇ ಅವನು ಸ್ಕಾಟ್‌ನೆಂದು ಭಾವಿಸಿ ಸ್ಯಾಂಡರ್ಸನ ಚಲನವಲನಗಳನ್ನೆಲ್ಲ ಸೂಕ್ಷ್ಮವಾಗಿ ಅವಲೋಕಿಸಿದನು. ಈ ಕೊಲೆಯ ಯೋಜನೆಯು ಸಂಪೂರ್ಣ ಯಶಸ್ವಿಯಾದರೂ ಸುಖದೇವನ ಈ ತಪ್ಪಿಸಿಂದ ಸ್ಕಾಟ್‌ನ ಬದಲು ಸ್ಯಾಂಡರ್ಸನು ಕ್ರಾಂತಿಕಾರಿಗಳ ಕ್ಷೋಭಕ್ಕೆ ಬಲಿಯಾದನು. ಈ ಕೊಲೆಯ ಕಾರ್ಯವನ್ನು ಯಶಸ್ವಿಗೊಳಿಸುವುದಕ್ಕಾಗಿ ಲಾಹೋರ ನಗರದಲ್ಲಿ ದಿ. ೧೬--೧೨--೨೮ ರಂದು ೨೦ ಜನ ಕ್ರಾಂತಿಕಾರಿಗಳು ಸೇರಿದ್ದರು.

ಅವರೆಲ್ಲರೂ ಬಹುಕಾಲದಿಂದ ನಿರೀಕ್ಷಿಸುತ್ತಿದ್ದ ೧೭—೧೨—೨೮ ನೇ ದಿವಸವು ಕೊನೆಗೊಮ್ಮೆ ಉದಯವಾಯಿತು. ಮಧ್ಯಾಹ್ನದ ಊಟ ಮುಗಿಸಿಕೊಂಡು ಒತ್ತಟ್ಟಿಗೆ ಸೇರಿದ್ದ ಆ ಕ್ರಾಂತಿಕಾರಿಗಳೆಲ್ಲ ತಮ್ಮ ಕಾರ್ಯಸಾಧನೆಗಾಗಿ ತಂತಮ್ಮ ನಿರ್ದಿಷ್ಟ ಸ್ಥಾನಗಳಿಗೆ ಹೋದರು. ಪ್ರತಿದಿವಸದ ಪರಿಪಾಠದಂತೆ ಸುಖದೇವನು ಸರಿಯಾಗಿ ೩ ಘಂಟೆಗೆ ಪೋಲೀಸು ಕಚೇರಿಗೆ ಹೋದನು. ೩॥ ಘಂಟೆಯಾದ ನಂತರ ರಾಜಗುರು, ಭಗತ್‌ಸಿಂಗರು ಹೊರಬಿದ್ದರು. ಶಿವರಾಮ ರಾಜಗುರುವಿನ ಹತ್ತಿರ ರಿವಾಲ್ವರ್ ಇತ್ತು. ಭಗತ್‌ಸಿಂಗನು ಆಟೊಮ್ಯಾಟಿಕ್ ಪಿಸ್ತೂಲನ್ನು ಧರಿಸಿದ್ದನು. ಅವನ ಹತ್ತಿರ ಒಂದು ಸೈಕಲ್ ಇದ್ದಿತು. ಹೋಗುವಾಗ ದಾರಿಯಲ್ಲಿ ಅಂಗಡಿಯಿಂದ ಇನ್ನೊಂದು ಸೈಕಲ್ ತೆಗೆದುಕೊಂಡು ಹೋದರು. ಪೋಲೀಸು ಕಚೇರಿಯಿಂದ ತುಸು ಮುಂದಕ್ಕೆ ಒಂದು ಅಡ್ಡರಸ್ತೆಯಲ್ಲಿ ತಮ್ಮ ಬೇಟೆಯ ಹಾದಿಯನ್ನು ಕಾಯುತ್ತ

ನಿಂತುಕೊಂಡರು. ಅಷ್ಟರಲ್ಲಿ ಚಂದ್ರಶೇಖರ ಆಜಾದನು ಮತ್ತೊಂದು ದಾರಿಯಿಂದ ಬಂದು ಬೇರೊಂದು ಸ್ಥಳದಲ್ಲಿ ನಿಂತುಕೊಂಡನು. ಅವನ ಹತ್ತಿರ ಅವನ ಚಿರಸಹಕಾರಿಯಾದ ಪಿಸ್ತೂಲು ಕಾಡತೂಸುಗಳ ಬೆಲ್ಟು ಇದ್ದವು. ತನ್ನ ಎಳೆ ಮೀಸೆಗೆ ಹುರಿ ಹಾಕುತ್ತ ಅವನು ಎಲ್ಲವನ್ನೂ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸುತ್ತಿದ್ದನು.

ಅದೇ ೪ ಘಂಟೆಯಾಗಿರಬಹುದು. ಪೋಲೀಸು ಕಚೇರಿಯಿಂದ ಸ್ಯಾಂಡರ್ಸನು ಹೊರಬಿದ್ದು ಮೋಟರ್ ಬೈಕನ್ನು ಹತ್ತಿ ಆರ್ಭಟದಿಂದ ಹೊರಟನು. ಅವನ ಹಿಂದೆಯೇ ಸುಖದೇವನೂ ಕಚೇರಿಯಿಂದ ಹೊರಬಿದ್ದು ಕೈಯೆತ್ತಿ ಸನ್ನೆ ಮಾಡಿ ಎಲ್ಲಿಯೋ ಹೊರಟು ಹೋದನು. ಫಟ್-ಫಟ್-ಫಟ್ ಫಟ್ ಶಬ್ದ ಮಾಡುತ್ತ ಆ ಮೋಟರ್ ಬೈಕು ಅಡ್ಡರಸ್ತೆಯ ಹತ್ತಿರ ಬಂದಿತು. ರಾಜಗುರುವು ಒಂದು ಗುಂಡು ಹಾರಿಸಿದನು. ತೊಡೆಗೆ ಪೆಟ್ಟಾಗಿ ಸ್ಯಾಂಡರ್ಸನು ಕೆಳಗೆ ಧೊಪ್ಪನೆ ಬಿದ್ದನು. ಅಷ್ಟರಲ್ಲಿ ಭಗತ್‌ಸಿಂಗನು ಮುಂದುವರಿದು ತನ್ನ ಆಟೊಮ್ಯಾಟಿಕ್ ಪಿಸ್ತೂಲಿನಿಂದ ಅವನ ಎದೆಗೆ ಗುಂಡಿಕ್ಕಿದನು. ಸ್ಯಾಂಡರ್ಸನು ಗತಪ್ರಾಣನಾದನು!

ಸ್ಯಾಂಡರ್ಸನ ಹಿಂದೆಯೇ ಹೊರಬಿದ್ದ ಫರ್ನ್‌ನೆಂಬ ಪೋಲೀಸು ಅಧಿಕಾರಿಯು ಈ ಕ್ರಾಂತಿಕಾರಿಗಳನ್ನು ಹಿಡಿಯಬೇಕೆಂದು ಯೋಚಿಸಿದನು. ಭಗತ್‌ಸಿಂಗ—ರಾಜಗುರು ಸೈಕಲ್ ಹತ್ತಿ ಹತ್ತಿರವೇ ಇದ್ದ ಡಿ. ಏ. ವಿ. ಕಾಲೇಜಿನ ವಸತಿಗೃಹಕ್ಕೆ ಹೋದರು. ಅವರ ರಕ್ಷಣೆಯ ಭಾರವನ್ನು ಹೊತ್ತಿದ್ದ ಚಂದ್ರಶೇಖರನೇ ಫರ್ನನ ಮೇಲೆ ಗುಂಡು ಹಾರಿಸಿದನು. ಅವನ ಹತ್ತಿರದಿಂದ ಎರಡು ಗುಂಡುಗಳು ಹಾದು ಹೋಗುವಷ್ಟರಲ್ಲಿ ಫರ್ನನು ಪೋಲೀಸು ಕಚೇರಿಗೆ ಹಿಂದಿರುಗಿದನು. ಚಂದ್ರಶೇಖರನು ಓಡುತ್ತೋಡುತ್ತ ಡಿ.ಎ.ವಿ. ಕಾಲೇಜಿನ ವಸತಿಗೃಹದ ಕಡೆಗೆ ನಡೆದನು. ಆದರೆ ಚಾನನ್‌ಸಿಂಗನೆಂಬವನು ಅವನನ್ನು ಬೆನ್ನಟ್ಟಿದನು. ಆಜಾದನು ಅವನಿಗೆ ವಾಪಸಾಗಲು ಹೇಳಿದನು. ಅವನು ಕೇಳದೆ ಹಾಗೆಯೇ ಹಿಂಬಾಲಿಸಿದನು. ಕೊನೆಗೆ ವಸತಿಗೃಹದ ದ್ವಾರವನ್ನು ಪ್ರವೇಶಿಸುವಾಗ ಆಜಾದನು ಹಿಂದೆ ನೋಡಿ ಗುರಿಯಿಟ್ಟು ಗುಂಡು ಹಾರಿಸಿದನು. ಚಾನನ್‌ಸಿಂಗನು ನಿಶ್ಚೇಷ್ಟಿತನಾಗಿ ಅಲ್ಲಿಯೇ ಬಿದ್ದುಬಿಟ್ಟನು.

ಪೋಲೀಸು ಕಚೇರಿಗೆ ಮರಳಿದ ಫರ್ನನು ಆದ ಅನಾಹುತವನ್ನು ಯೋಗ್ಯ ಅಧಿಕಾರಿಗಳಿಗೆ ಅರುಹಿದನು. ತಕ್ಷಣವೇ ಕ್ರಾಂತಿಕಾರಿಗಳನ್ನು ಬಂಧಿಸಲು ಆವಶ್ಯಕವಾದ ಉಪಾಯಗಳನ್ನೆಲ್ಲ ಕೈಗೊಳ್ಳಲಾಯಿತು. ಸುಸಜ್ಜಿತವಾದ ಒಂದು ಪೋಲೀಸು ದಳವನ್ನು ಡಿ. ಎ. ವಿ. ಕಾಲೇಜಿನ ವಸತಿಗೃಹಕ್ಕೆ ಕಳಿಸಲಾಯಿತು. ಲಾಹೋರಿಗೆ ಬರಹೋಗುವ ಎಲ್ಲ ಮಾರ್ಗಗಳ ಮೇಲೆ ಬಲವಾದ ಪೋಲೀಸು ದಳಗಳ ಕಾವಲನ್ನಿಡಲಾಯಿತು. ರೈಲ್ವೆ ನಿಲ್ದಾಣವು ಗೂಢಚಾರರಿಂದ ತುಂಬಿ ಹೋಯಿತು. ಮತ್ತೆ ಅವಶ್ಯ ಕಂಡಲ್ಲೆಲ್ಲ ಗೂಢಚಾರರನ್ನು ಕಳಿಸಲಾಯಿತು. ಎಲ್ಲೆಲ್ಲಿಯೂ ಅವರ ಸಂಚಾರವೇ ಸಂಚಾರವಾಯಿತು.

ಡಿ. ಎ. ವಿ. ಕಾಲೇಜ ವಸತಿಗೃಹಕ್ಕೆ ಕಳಿಸಿದ ಪೋಲೀಸು ದಳವು ವಸತಿಗೃಹವನ್ನು ಸುತ್ತುಗಟ್ಟಿ ನಿಂತಿತು. ಎಲ್ಲ ಮಾರ್ಗಗಳನ್ನು ತಡೆದು ಹಿಡಿಯಲಾಯಿತು. ವಸತಿಗೃಹದ ಮೂಲೆಮೂಲೆಯನ್ನೂ ಶೋಧಿಸಿ ನೋಡಲಾಯಿತು. ಆದರೆ ಪಕ್ಷಿಗಳು ಮೊದಲೇ ಹಾರಿಹೋಗಿದ್ದವು.

ಪೋಲೀಸು ಅಧಿಕಾರಿಗಳು ಬಲವಾದ ಜಾಲವನ್ನೇನೋ ಬೀಸಿದ್ದರು. ಆದರೆ ಕ್ರಾಂತಿಕಾರಿಗಳ ಕೌಶಲ್ಯದಿಂದ ಅವರು ಈ ಜಾಲದೊಳಗಿಂದಲೂ ಜಾರಿ ಹೋಗುವುದು ಸಾಧ್ಯವಾಯಿತು. ಡಿ. ಎ. ವಿ. ಕಾಲೇಜಿನ ವಸತಿಗೃಹದಲ್ಲಿ ಬಂದ ತಕ್ಷಣ ಭಗತ್‌ಸಿಂಗನು ಮೊದಲೇ ನಿಯೋಜಿತವಾದ ಕೋಣೆಯಲ್ಲಿ ಹೋಗಿ ಆಂಗ್ಲ ಪದ್ಧತಿಯ ವೇಷವನ್ನು ಧರಿಸಿದನು. ಅದೇ ಕೋಣೆಯಲ್ಲಿ ಆಂಗ್ಲ ಪದ್ಧತಿಯ ಉಡುಪನ್ನು ಧರಿಸಿ ಸಿದ್ಧಳಾಗಿದ್ದ 'ದುರ್ಗಾದೇವಿ ಬೋಹರಾ' ಎಂಬ ಲಾವಣ್ಯವತಿಯಾದ ಮಹಿಳಾ ಕ್ರಾಂತಿಕಾರಿಯೊಬ್ಬಳು ಭಗತ್‌ಸಿಂಗನ ದಾರಿಯನ್ನೇ ಕಾಯುತ್ತಿದ್ದಳು. ಭಗತ್‌ಸಿಂಗನ ಟ್ರಂಕುಗಳ ಮೇಲೆ ಉಚ್ಚ ಸರಕಾರಿಯೊಬ್ಬನ ಹೆಸರಿನ ಲೇಬಲ್‌ಗಳನ್ನು ಅಂಟಿಸಲಾಗಿತ್ತು. ರಾಜಗುರುವು ಸೇವಕನ ಉಡುಪನ್ನು ಧರಿಸಿ ಟಿಫಿನ್ ಕ್ಯಾರಿಯರ್ ಒಂದನ್ನು ಹಿಡಿದು ಅವನೊಡನೆ ಹೊರಟನು. ಭಗತ್‌ಸಿಂಗನು ಗೂಢಚಾರರ ಕಣ್ಣೆದುರಿಗೇನೇ ಮೊದಲನೆಯ ತರಗತಿಯ ಕಂಪಾರ್ಟಮೆಂಟ್ ಒಂದರಲ್ಲಿ ಕುಳಿತುಕೊಂಡನು. ಇತ್ತ ಚಂದ್ರಶೇಖರ ಆಜಾದನು ಉಳಿದ ಕ್ರಾಂತಿಕಾರಿಗಳೊಡನೆ ಬೇರೊಂದು ಉಪಾಯವನ್ನವಲಂಬಿಸಿದನು. ಅವನು

ಮುದುಕ-ಮುದುಕಿಯರನ್ನೊಳಗೊಂಡು ಮಧುರೆಗೆ ಹೋಗುವ ಯಾತ್ರಿಕರ ಗುಂಪೊಂದನ್ನು ತಯಾರಿಸಿದನು. ಮತ್ತು ತಾನು ಒಬ್ಬ ಸಾಂಪ್ರದಾಯಿಕ ಬ್ರಾಹ್ಮಣ ಪಂಡಿತನ ವೇಷವನ್ನು ಧರಿಸಿದನು. ಗೂಢಚಾರರು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಸ್ಯಾಂಡರ್ಸನ ಕೊಲೆಗಾರರನ್ನು ಶೋಧಿಸುತ್ತಿದ್ದರು. ಅಷ್ಟರಲ್ಲಿ ರೈಲು ಲಾಹೋರ ನಿಲ್ದಾಣವನ್ನು ಬಿಟ್ಟಿತು. ಮತ್ತು ಭಾರತದ ಈ ವೀರಪುತ್ರರನ್ನು ಸಂತಪ್ತ ಅಧಿಕಾರಿಗಳ ಕರಾಳ ದವಡೆಯೊಳಗಿಂದ ಪಾರು ಮಾಡಿತು.

ಸ್ಯಾಂಡರ್ಸನ ಕೊಲೆಯಿಂದ ರಾಜ್ಯಕರ್ತರಿಗೆ ಸಿಡಿಲು ಬಡಿದಂತಾಯಿತು. ಕೊಲೆಗಾರನ ಪತ್ತೆಯೂ ಆಗಲಿಲ್ಲ. ಆದರೆ ಮರುದಿವಸ ಲಾಹೋರ ನಗರದಲ್ಲಿ ಅಂಟಿಸಿದ ಭಿತ್ತಿಪತ್ರಗಳು ಇದು ಭಾರತೀಯ ಕ್ರಾಂತಿಕಾರಿಗಳ ಕಾರ್ಯವೆಂದು ಸಾರಿ ಹೇಳುತ್ತಿದ್ದವು. ಆ ಪ್ರಕಟನೆಯ ಶಿರೋಭಾಗದಲ್ಲಿ "ಹಿಂದೂಸ್ಥಾನ ಸೋಷಲಿಸ್ಟ ರಿಪಬ್ಲಿಕನ್ ಅಸೋಸಿಯೇಶನ್" ಎಂದು ಕೆಂಪು ಶಾಯಿಯಿಂದ ದಪ್ಪ ಅಕ್ಷರಗಳಲ್ಲಿ ಬರೆಯಲಾಗಿತ್ತು. ಪ್ರಕಟನೆಯಲ್ಲಿ ಕ್ರಾಂತಿಕಾರಿಗಳು ತಮ್ಮ ಕೃತ್ಯವನ್ನು ಸಮರ್ಥಿಸಿ ಈ ರೀತಿ ವಾಕ್ಯವನ್ನು ಬರೆದಿದ್ದರು. "ಸ್ಯಾಂಡರ್ಸನು ಕೊಲ್ಲಲ್ಪಟ್ಟನು; ಲಾಲಾಜಿಯವರ ಮೃತ್ಯುವಿನ ಮುಯ್ಯಿ ತೀರಿಸಿಕೊಳ್ಳಲಾಯಿತು!"

## ಕಲ್ಕತ್ತೆಯ ಪ್ರವಾಸ ಮತ್ತು ಬಾಂಬ್ ವಿದ್ಯೆ

ಸ್ಯಾಂಡರ್ಸನ ಕೊಲೆಯಾದ ನಂತರ ಪೋಲೀಸು ಅಧಿಕಾರಿಗಳೂ ಗೂಢಚಾರರ ದಳವೂ ಕೊಲೆಗಾರನ ಶೋಧ ಮಾಡಲು ತುಂಬಾ ಪ್ರಯತ್ನಪಟ್ಟರು. ಗೂಢಚಾರರ ಇಲಾಖೆಯವರಿಗೆ ಭಗತ್‌ಸಿಂಗನ ಪರಿಚಯವು ಚೆನ್ನಾಗಿದ್ದುದರಿಂದ ಅವನೇ ಸ್ಯಾಂಡರ್ಸನ ಕೊಲೆಗಾರನೆಂದು ಅವರು ನಿರ್ಣಯಿಸಿದರು. ಮತ್ತು ಅವನನ್ನು ಹಿಡಿಯುವದಕ್ಕಾಗಿ ಸತತ ಉದ್ಯೋಗವನ್ನಾರಂಭಿಸಿದರು. ಭಗತ್‌ಸಿಂಗನನ್ನು ಗುರುತಿಸಬಲ್ಲ ಗೂಢಚಾರರನ್ನು ದೊಡ್ಡ ದೊಡ್ಡ ರೈಲ್ವೆ ನಿಲ್ದಾಣಗಳಲ್ಲಿಡಲಾಯಿತು. ಪೋಲೀಸು ಅಧಿಕಾರಿಗಳೂ ದಕ್ಷತೆಯಿಂದ ಅವನನ್ನು ಶೋಧಿಸುತ್ತಿದ್ದರು. ರೈಲ್ವೆ ಪೋಲೀಸರ

ಬಂದೋಬಸ್ತು ಬಿಗಿಯಾಯಿತು. ಈ ರೀತಿ ವ್ಯವಸ್ಥಿತವಾಗಿ ಭಗತ್‌ಸಿಂಗನ ಬೇಟೆಗಾರಂಭವಾಯಿತು. ಆದರೆ ಅವನಾದರೋ ಅವರೆಲ್ಲರಿಗೂ ಮಂಕು ಬೂದಿ ಹಚ್ಚಿ ನಿರ್ಭಯವಾಗಿ ಸಂಚರಿಸುತ್ತಲೇ ಇದ್ದನು.

ಇದೇ ಸಮಯಕ್ಕೆ ರಾಷ್ಟ್ರೀಯ ಮಹಾಸಭೆಯ ಅಧಿವೇಶನವು ಕಲ್ಕತ್ತದಲ್ಲಿ ಆರಂಭವಾಗುವುದರಲ್ಲಿತ್ತು. ಈ ಸಂದರ್ಭವನ್ನು ಸಾಧಿಸಿ ಭಗತ್‌ಸಿಂಗನು ಕಲ್ಕತ್ತಕ್ಕೆ ಹೋಗಬೇಕೆಂದು ಯೋಚಿಸಿದನು. ಬಂಗಾಲವು ಕ್ರಾಂತಿಕಾರಿಗಳ ಜನ್ಮಸ್ಥಳ. ಹಿಂದೂಸ್ಥಾನದಲ್ಲಿ ಮೊದಲನೆಯ ಬಾಂಬ್ ಹಾರಿಸಿದವನು ೧೬ ವರ್ಷದ ಒಬ್ಬ ಬಂಗಾಲಿ ಯುವಕ ಖುದೀರಾಮ್ ಬೋಸ್. ಬಂಗಾಲದ ಪ್ರಾಂತದ ತುಂಬೆಲ್ಲಾ ಕ್ರಾಂತಿಕಾರಿಗಳ ಜಾಲವೇ ಹರಡಿತ್ತು. ಆದರೆ ಇತ್ತೀಚೆಗೆ ಕೆಲವು ಕಾಲದಿಂದ Bengal Criminal Law Amendment Act ಅನ್ನು ತೀವ್ರವಾಗಿ ಜಾರಿಯಲ್ಲಿ ತಂದುದರ ಪರಿಣಾಮವಾಗಿ ಬಂಗಾಲದ ಅನೇಕ ಕ್ರಾಂತಿಕಾರಿಗಳು ಸೆರೆಮನೆಯನ್ನು ಕಂಡಿದ್ದರು. ಇನ್ನುಳಿದ ಕ್ರಾಂತಿಕಾರಿಗಳಲ್ಲಿ ಪ್ರಮುಖರಾದವರನ್ನೆಲ್ಲ ದೇವಘರ್ ಒಳಸಂಚಿನ ಮೊಕದ್ದಮೆಯಲ್ಲಿ ಸೇರಿಸಲಾಗಿತ್ತು. ಇತ್ತ ಕಾಕೋರಿ ಪ್ರಕರಣದಿಂದ ಯುಕ್ತಪ್ರಾಂತದ ಮುಖಂಡರೆಲ್ಲ ಮಾಯವಾಗಿದ್ದರು. ಹೀಗಾಗಿ ಈ ಎರಡು ಪ್ರಾಂತಗಳಲ್ಲಿಯ ಪರಸ್ಪರ ಸಂಬಂಧವೇ ತಪ್ಪಿ ಹೋಗಿತ್ತು. ಈ ಸಂಬಂಧವನ್ನು ಮತ್ತೆ ಪ್ರಸ್ಥಾಪಿಸಬೇಕೆಂದು ಭಗತ್‌ಸಿಂಗನ ಮನಸ್ಸಾಗಿತ್ತು. ಆ ದೃಷ್ಟಿಯಿಂದ ಅವನು ಪ್ರಯತ್ನಶೀಲನಾದನು. ಅಲ್ಲಿನ ಕ್ರಾಂತಿಕಾರಿ ಸಂಸ್ಥೆಗಳ ಅಂತರ್ಮಂಡಳದಲ್ಲಿ ಪ್ರವೇಶ ದೊರೆಯಲು ಅವನಿಗೇನೂ ವಿಶೇಷ ತೊಂದರೆಯಾಗಲಿಲ್ಲ. ತಮ್ಮ ಜೀವನದ ಬಹುಭಾಗವನ್ನು ಸೆರೆಮನೆಯಲ್ಲಿಯೇ ಸವೆಸಿದ್ದ ಕ್ರಾಂತಿಪಕ್ಷದ ಮುಂದಾಳುಗಳನ್ನು ಅವನು ನೋಡಿದನು. ಮೊದಲೇ ಬಂಗಾಲದ ಬಗ್ಗೆ ಆದರವಿದ್ದ ಅವನಮೇಲೆ ಅವರ ಸಂದರ್ಶನದ ಪ್ರಭಾವವು ವಿಶೇಷವಾಗಿ ಆಯಿತು. ಆದರೆ ಭಗತಸಿಂಗನೂ ಅವನ ಪಕ್ಷವೂ ಪಂಜಾಬ್, ಯುಕ್ತಪ್ರಾಂತಗಳಲ್ಲಿ ಅನುಸರಿಸಿದ ಮಾರ್ಗದಲ್ಲಿ ಅವರಿಗೆ ನಂಬಿಗೆಯಿರಲಿಲ್ಲವೆಂಬುದು ಅವನ ನಿದರ್ಶನಕ್ಕೆ ಬಂದಿತು. "ದೇಶವನ್ನು ಸ್ವತಂತ್ರಗೊಳಿಸಬೇಕಾದರೆ ಕೊನೆಗೆ ಸಶಸ್ತ್ರ ಕ್ರಾಂತಿಯನ್ನೇ ಮಾಡಬೇಕಾಗುವುದು." ಎಂಬೊಂದೇ ವಿಷಯದಲ್ಲಿ ಅವರೆಲ್ಲರ ಮತ್ತೈಕ್ಯವಿದ್ದಿತು. ಸಮಾಜವಾದಿ

ದೃಷ್ಟಿಕೋನದ ಆವಶ್ಯಕತೆ, ಪಕ್ಷದ ಕಾರ್ಯದಲ್ಲಿ ಭಯೋತ್ಪಾದಕ ಚಟುವಟಿಕೆಗಳಿಗೆ ಇರಬೇಕಾದ ಸ್ಥಾನ, ಗುಪ್ತತೆಯ ಆವಶ್ಯಕತೆ—ಇವೇ ಮೊದಲಾದ ಅನೇಕ ವಿಷಯಗಳಲ್ಲಿ ಅವರಲ್ಲಿ ತೀವ್ರ ಮತಭೇದವಿದ್ದಿತು.

ಈ ಎಲ್ಲ ಕಾರಣಗಳಿಂದಾಗಿ ಇವರ ಕೇಂದ್ರ ಸಂಘಟನೆಯ ಸೂತ್ರದಲ್ಲಿ ಸೇರಲಿಲ್ಲ. ಅದು ತನ್ನ ಕಾರ್ಯಕ್ರಮವನ್ನು ಪ್ರತ್ಯೇಕವಾಗಿಯೇ ಜಾರಿಗೆ ತರುವ ಮಾರ್ಗವನ್ನನುಸರಿಸಿತು. ಹೀಗಾಗಿ ಭಗತ್‌ಸಿಂಗನ ಕಲ್ಕಿತ್ತಾ ಭೇಟಿಯ ಮುಖ್ಯ ಉದ್ದೇಶವೇನೋ ಸಾಧಿಸದೆ ಹೋಯಿತು. ಆದರೆ ಅಲ್ಲಿಯ ಕೆಲವು ಪುರಾತನ ದಹಶತವಾದಿಗಳೊಡನೆ ಆದ ಮಾತುಕತೆಗಳಿಂದ ಬಾಂಬ್‌ಗಳನ್ನು ತಯಾರಿಸುವ ಆವಶ್ಯಕತೆಯ ಬಗ್ಗೆ ಅವನಿಗೆ ಮನವರಿಕೆಯಾಯಿತು. ಆದುದರಿಂದ ತಮಗೆ ಬಾಂಬ್ ತಯಾರಿಸುವ ಸಂಪೂರ್ಣ ರೀತಿಯನ್ನು ಕಲಿಸಬಲ್ಲ ತಜ್ಞನನ್ನು ಅವನು ಶೋಧಿಸಲು ತೊಡಗಿದನು. ಕೆಲವು ಕಷ್ಟಗಳನ್ನನುಭವಿಸಿ ಕೊನೆಗೆ ಒಬ್ಬ ತಜ್ಞನನ್ನು ದೊರಕಿಸುವುದು ಅವನಿಗೆ ಸಾಧ್ಯವಾಯಿತು. ಆದರೆ ಅವನು ಈ ಕಾರ್ಯವನ್ನು ಕೈಗೊಳ್ಳಲು ಒಪ್ಪದಾದನು. ,ತಾನು ಬಂಗಾಲಿ ಕ್ರಾಂತಿಪಕ್ಷದ ಸದಸ್ಯನಾಗಿರುವುದರಿಂದ ಪಕ್ಷಪ್ರಮುಖರ ಶಿಸ್ತಿಗೆ ಕಟ್ಟಿಬಿದ್ದವನು. ಅವರಾದರೋ ಬಾಂಬ್ ತಯಾರಿಸುವ ದಕ್ಕಾಗಲಿ ಉಪಯೋಗಿಸುವದಕ್ಕಾಗಲಿ ಸಮ್ಮತಿಸದವರು.' ಎಂದು ಮುಂತಾಗಿ ಹೇಳಿದನು. ಆದರೆ ' ಬಂಗಾಲಕ್ಕೆ ಅನ್ವಯಿಸುವ ಮಾತೇ ಯುಕ್ತಪ್ರಾಂತ–ಪಂಜಾಬಗಳಿಗೆ ಅನ್ವಯಿಸುವುದಿಲ್ಲ. ಅಲ್ಲಿಯ ಪರಿಸ್ಥಿತಿಯೇ ಬೇರೆ. ಇಲ್ಲಿಯ ಪರಿಸ್ಥಿತಿಯೇ ಬೇರೆ. ಆದ್ದರಿಂದ ಆ ಪ್ರಾಂತಗಳಲ್ಲಿಯಷ್ಟೇ ಬಾಂಬ್ ಉಪಯೋಗಿಸಿ ಬಂಗಾಲಕ್ಕೆ ತನ್ನ ಕಾರ್ಯಕ್ರಮವನ್ನು ವ್ಯವಸ್ಥಿತವಾಗಿ ಕೊನೆಗಾಣಿಸಲು ಶಾಂತಿಯನ್ನು ಕೊಡಬಹುದು.' ಎಂದು ಪರಿಪರಿಯಿಂದ ತಿಳಿಸಿ ಹೇಳಿ ಅವನು ಈ ಕಾರ್ಯಕ್ಕೆ ಒಪ್ಪುವಂತೆ ಭಗತ್‌ಸಿಂಗನು ಅವನ ಮನವೊಲಿಸಿದನು. ಈ ರೀತಿ ಭಗತ್‌ಸಿಂಗ ಮೊದಲಾದವರಿಗೆ ಬಾಂಬ್ ವಿದ್ಯೆಯನ್ನು ಕಲಿಸಲು ಒಪ್ಪಿಕೊಂಡವನು ಬೇರೆ ಯಾರೂ ಆಗಿರದೆ, ಮುಂದೆ ಅನ್ನಸತ್ಯಾಗ್ರಹದಲ್ಲಿ ಪ್ರಾಣವನ್ನರ್ಪಿಸಿ ಅಮರನಾದ ' ಜತೀಂದ್ರದಾಸ ' ನೇ ಆಗಿದ್ದನು.

ಬಾಂಬ್ ವಿದ್ಯೆಯನ್ನು ಕಲಿಯುವ ವ್ಯವಸ್ಥೆಯೊಡನೆ ಭಗತ್‌ಸಿಂಗನು ಇನ್ನೊಂದು ಕೆಲಸವನ್ನು ಸಾಧಿಸಿದನು. ಹಿಂದುಸ್ಥಾನ ಸೋಷಲಿಸ್ಟ ರಿಪಬ್ಲಿ

ಕನ್ ಅಸೋಸಿಯೇಶನ್ನಿನ ಬಿಹಾರ ಶಾಖೆಯ ಸದಸ್ಯರೊಡನೆ ವೈಯಕ್ತಿಕ ಸಂಬಂಧವನ್ನು ಬೆಳೆಸಲು ದೊರೆತ ಸಂಧಿಯನ್ನು ಅವನು ಪೂರ್ತಿಯಾಗಿ ಉಪಯೋಗಿಸಿಕೊಂಡನು. ಇದರ ಪರಿಣಾಮವಾಗಿ ಬಿಹಾರೀ ಸದಸ್ಯನೊಬ್ಬನ ನಾಯಕತ್ವದಲ್ಲಿ ಕಲ್ಕತ್ತದಲ್ಲಿ ಒಂದು ಹೊಸ ಕೇಂದ್ರವನ್ನು ಸ್ಥಾಪಿಸಲಾಯಿತು. ಫರಾರಿಯಾದವರಿಗೆ ಆಶ್ರಯಕ್ಕೆಂದು ಒಂದು ಆಶ್ರಯಸ್ಥಾನವನ್ನೂ ಸಿದ್ಧಗೊಳಿಸಲಾಯಿತು.

ಸ್ಯಾಂಡರ್ಸನ ಕೊಲೆಯಿಂದ ಪಕ್ಷದ ಗೌರವವು ಜನತೆಯಲ್ಲಿ ಹೆಚ್ಚಿತು. ಯುವಕರೂ ವಿದ್ಯಾರ್ಥಿಗಳೂ ಕ್ರಾಂತಿಪಕ್ಷದೊಡನೆ ಹೆಚ್ಚೆಚ್ಚು ಸಹಾನುಭೂತಿಯನ್ನು ತೋರಹತ್ತಿದರು ಅನೇಕರು ಪಕ್ಷಕ್ಕೆ ಧನಸಹಾಯವನ್ನು ಮಾಡಹತ್ತಿದರು. ಸ್ಯಾಂಡರ್ಸನ ಕೊಲೆಯ ಮುಂಚಿನ ದಿವಸ ಬಾಡಿಗೆ ಇದ್ದ ಕೋಣೆಯಲ್ಲಿ ರಾತ್ರಿ ದೀಪ ಹಚ್ಚಬೇಕೆಂದರೆ ಎಣ್ಣೆಗೆ ಕೂಡ ಈ ತರುಣರ ಹತ್ತರ ಕಾಸು ಇರಲಿಲ್ಲ. ಆದರೆ ಕೊಲೆಯ ನಂತರ ಅನೇಕರು ಮಾಡಿದ ಧನಸಹಾಯದಿಂದಾಗಿ ಕೆಲವು ದಿವಸಗಳ ವರೆಗೆ ಪಕ್ಷದ ಆರ್ಥಿಕ ಸ್ಥಿತಿಯು ಉತ್ತಮವಾಯಿತು. ಜನತೆಯಲ್ಲುಂಟಾದ ಈ ಸಹಾನುಭೂತಿಯ ಭಾವನೆಯಿಂದಲೇ ಬಾಂಬ್‌ಗಳನ್ನು ತಯಾರಿಸುವುದು ಭಗತ್‌ಸಿಂಗ ಮೊದಲಾದ ಕ್ರಾಂತಿಕಾರಿಗಳಿಗೆ ಸಾಧ್ಯವಾಯಿತು. ಕೆಲವು ವರ್ತಕರು ಇವರಿಗೆ ಸಹಾಯ ಮಾಡಲು ಒಪ್ಪಿದ್ದರಿಂದ ಬಾಂಬ್ ತಯಾರಿಸಲು ಆವಶ್ಯಕವಿದ್ದ ಸಲಕರಣೆಗಳನ್ನು ಸಂಗ್ರಹಿಸುವುದು ಸಾಧ್ಯವಾಯಿತು.

ಬಾಂಬ್ ತಯಾರಿಸುವ ಕೆಲಸವನ್ನು ಆಗ್ರಾದಲ್ಲಿ ಮಾಡಬೇಕೆಂದು ಗೊತ್ತಾಗಿ ಈ ಕೆಲಸಕ್ಕಾಗಿಯೆಂದೇ ಒಂದು ಹೊಸ ಮನೆಯನ್ನು ಬಾಡಿಗೆ ಹಿಡಿಯಲಾಯಿತು. ಗೊತ್ತಾದ ಸಮಯಕ್ಕೆ ಬಾಂಬ್‌ತಜ್ಞ ಜತೀಂದ್ರದಾಸನು ಅಲ್ಲಿಗೆ ಬಂದನು. ಅವನು ಕ್ರಾಂತಿಪಕ್ಷವು ಆರಿಸಿಕೊಟ್ಟ ಕೆಲವು ಯುವಕರಿಗೆ ಬಾಂಬ್ ವಿದ್ಯೆಯನ್ನು ಸಂಪೂರ್ಣವಾಗಿ ಕಲಿಸಿದನು. ಈ ವಿದ್ಯೆಯು ಹಸ್ತಗತವಾದೊಡನೆ ಪಕ್ಷದ ಎಲ್ಲ ಸದಸ್ಯರಿಗೆ ಒಂದು ಬಗೆಯ ಹೊಸ ಉತ್ಸಾಹವುಂಟಾಯಿತು. ಮುಂದೆ ಎರಡು ತಿಂಗಳ ವರೆಗೆ ಉಳಿದೆಲ್ಲ ಕಾರ್ಯಕ್ರಮಗಳನ್ನು ಬದಿಗಿರಿಸಿ ಈ ಭಯಂಕರ ಶಸ್ತ್ರವನ್ನು ನಿರ್ಮಿಸುವುದರಲ್ಲಿಯೇ ಅವರೆಲ್ಲರೂ ತಮ್ಮ ಸಂಪೂರ್ಣ ಸಮಯವನ್ನು ಕಳೆದರು. ಆಗ್ರಾದಲ್ಲಿ ಮೊಟ್ಟ

ಮೊದಲು ತಯಾರಾದ ಎರಡು ಬಾಂಬ್‌ಗಳನ್ನು ಝಾಂಸಿಗೆ ಒಯ್ದು ಅವುಗಳ ಸ್ಫೋಟಕ ಶಕ್ತಿಯನ್ನು ನೋಡುವ ಪ್ರಯೋಗವನ್ನೂ ಮಾಡಲಾಯಿತು. ಈ ಪ್ರಯೋಗದಿಂದ ಕ್ರಾಂತಿಕಾರಿಗಳಿಗೆ ತೃಪ್ತಿಯಾಯಿತು. ಅವರು ಇಮ್ಮಡಿ ಉತ್ಸಾಹದಿಂದ ಆಗ್ರಾದ ಹೊರ್ತಾಗಿ ಲಾಹೋರ ಮತ್ತು ಸಹರಾಣಪೂರ ಈ ಎರಡು ಸ್ಥಳಗಳಲ್ಲಿ ಬಾಂಬ್ ತಯಾರಿಸುವ ಕಾರಖಾನೆಗಳನ್ನು ಆರಂಭಿಸಿದರು. ಈ ರೀತಿ ಬಾಂಬ್ ತಯಾರಿಸುವ ಕಾರ್ಯವು ಮುಂದೆ ಸಾಗಿತು.

ಇದೇ ಸಂದರ್ಭದಲ್ಲಿ ಭಗತ್‌ಸಿಂಗನ ಜೀವನದಲ್ಲಿಯ ಒಂದು ಸೂಕ್ಷ್ಮ ಸನ್ನಿವೇಶವೊದಗಿತು. ಅವರ ಪಕ್ಷದಲ್ಲಿಯ ಸದಸ್ಯನೊಬ್ಬನು ಕೆಟ್ಟ ಕಾಹಿಲೆಯಿಂದ ಬಳಲುತ್ತ ಹಾಸಿಗೆ ಹಿಡಿದನು. ಅವನಿಗಾದ ಕಾಹಿಲೆಯು ಒಂದು ಕೆಟ್ಟ ವೈಲಿಯ ಬೇನೆ. ಭಗತ್‌ಸಿಂಗನೂ ಅವನ ಗೆಳೆಯರೂ ತಮ್ಮ ಸಹಕಾರಿಗೆ ಆದ ಈ ಕಾಹಿಲೆಯಲ್ಲಿ ಅವನನ್ನು ರೋಗದಿಂದ ಮುಕ್ತಗೊಳಿಸಲು ಅತ್ಯಂತ ಆತ್ಮೀಯತೆಯಿಂದ ಅವನ ಶುಶ್ರೂಷೆಯನ್ನು ಮಾಡಿದರು. ಅವರು ಸ್ವಂತ ಜೀವಕ್ಕಿರುವ ಅಪಾಯದ ಹೆದರಿಕೆಯನ್ನು ತೊರೆದು ಹಗಲೂ ಇರುಳೂ ಕೂಡಿಯೇ ಅವನ ಸೇವೆಯನ್ನು ಮಾಡಿದರು. ಸುದೈವದಿಂದ ಅವನು ಆ ಭಯಂಕರ ರೋಗದಿಂದ ಮುಕ್ತನಾಗಿ ಗುಣಹೊಂದಿದನು. ಆದರೆ ಇದೇ ಯುವಕನು ತನ್ನ ಬಂಧನವಾದ ಕೂಡಲೆ ಸ್ವಂತದ ರಕ್ಷಣೆಗಾಗಿ ಮಾಫಿಸಾಕ್ಷೀದಾರನಾಗಿ ಅವನ ಭಯಂಕರ ಕಾಹಿಲೆಯಲ್ಲಿ ಅವನ ಜೀವದ ರಕ್ಷಣೆಯನ್ನು ಮಾಡಿದವರ ವಿರುದ್ಧವೇ ಸಾಕ್ಷಿ ಹೇಳಿದನೆಂಬುದು ದೈವದುರ್ವಿಲಾಸವು!

## ಕೇಂದ್ರವಿಧಾನ ಸಭೆಯಲ್ಲಿ ಬಾಂಬ್

ಭಾವನೋತ್ಕಟತೆ, ಅದ್ಭುತತೆಯ ಆಕರ್ಷಣೆ ಮತ್ತು ಬಲಿದಾನದ ಸಿದ್ಧಾಂತ— ಇವು ಕ್ರಾಂತಿಕಾರಿಗಳ ಜೀವನವನ್ನೂ ಅದರೊಡನೆ ಕ್ರಾಂತಿಕಾರಿ ಸಂಸ್ಥೆಗಳ ಭವಿತವ್ಯವನ್ನೂ ರೂಪಿಸುತ್ತವೆ. ಸಶಸ್ತ್ರ ಕ್ರಾಂತಿಯ ಸಿದ್ಧಾಂತವನ್ನು ಅಂಗೀಕರಿಸಿದ ಕ್ರಾಂತಿಕಾರಿಗಳಲ್ಲಿ ಪ್ರಸ್ಥಾಪಿತ ಸರಕಾರದ ಉಚ್ಚಾಟನೆ ಮಾಡಲು ಜನತೆಯು ಸಮರ್ಥವಾಗುವಂತೆ ಅದನ್ನು ಸಂಘಟಿಸಲು ಬೇಕಾಗುವ ದೀರ್ಘಾವಧಿಯ ವರೆಗೆ ಪ್ರಯತ್ನಶೀಲರಾಗಿ ಉಳಿಯುವ ಮಾನಸಿಕ

ಸ್ಥೈರ್ಯವಿರುವದಿಲ್ಲ. ಅವರ ಭಾವನೋತ್ಕಟತೆಯು ಅವರನ್ನು ಅಧೀರರನ್ನಾಗಿ ಮಾಡುತ್ತದೆ. ಕಾರ್ಯಸಿದ್ಧಿಗಾಗಿ ಶಕ್ತಿಸಂಚಯ ಮತ್ತು ಕ್ರಾಂತಿಯುದ್ಧಕ್ಕಾಗಿ ಸಿದ್ಧತೆ ಮಾಡಲು ಸತತೋದ್ಯೋಗವೂ ಧೀರತನವೂ ಅಗತ್ಯ. ಸಿದ್ಧತೆಯ ಸಮಯದಲ್ಲಿ ದುಡುಕುತನ ಹಾನಿಕಾರಕ. ಆದರೆ ವರ್ಷಾನುವರ್ಷ ಸಿದ್ಧತೆಯಲ್ಲಿಯೇ ಕಾಲ ಕಳೆಯುವುದು ಕ್ರಾಂತಿಕಾರಿಗಳಿಗೆ ನೀರಸ ಜೀವನವೆನಿಸುತ್ತದೆ. ಅದರಲ್ಲೇನೂ ಆಕರ್ಷಣೆಯಿಲ್ಲ, ಸಾಹಸವಿಲ್ಲ, ಕೃತಿಯಿಲ್ಲವೆಂದು ಅವರು ಬಗೆಯುತ್ತಾರೆ. ಅವರ ದೃಷ್ಟಿಯಲ್ಲಿ ಅದೊಂದು ರುಕ್ಷಜೀವನವೆನಿಸುತ್ತದೆ. ಶಾಂತವಾಗಿ, ಸುಗಮವಾಗಿ, ಸತತ ತುಂಬಿ ಹರಿಯುವ ಗಂಗಾ ಪ್ರವಾಹವು ಲಕ್ಷಾವಧಿ ಜನರಿಗೆ ಚಿರಕಾಲದ ವರೆಗೆ ಜೀವನವನ್ನು ಕೊಡುತ್ತದೆಯೆಂಬುದು ಅವರ ಮನಸ್ಸಿಗೆ ಅರ್ಥವಾಗುವುದಿಲ್ಲ. ೯೦೦ ಅಡಿ ಎತ್ತರದಿಂದ 'ಧಡ್' 'ಧಡ್' ಎಂದು ಜಿಗಿಯುತ್ತಿರುವ ಜೋಗದ ಜಲಪಾತವು ಜಗತ್ತಿನ ಮೂಲೆ ಮೂಲೆಯೊಳಗಿನ ಜನರನ್ನು ತನ್ನೆಡೆಗೆ ಆಕರ್ಷಿಸಿಕೊಳ್ಳುತ್ತದೆಯೆಂಬುದು ಅವರ ಮನಸ್ಸಿನ ಮೇಲೆ ಹೆಚ್ಚಿನ ಪರಿಣಾಮವನ್ನು ಮಾಡುತ್ತದೆ. ಚಿರಂತನವಾಗಿ ಪ್ರಕಾಶಿಸುವ ನಂದಾದೀಪವು ಎಲ್ಲರಿಗೂ ಮಾರ್ಗದರ್ಶನ ಮಾಡುತ್ತದೆಂಬುದು ಅವರ ಗಮನಕ್ಕೆ ಬರುವುದಿಲ್ಲ. 'ಝುಗ್' ಎಂದು ವಿಶ್ವದ ಕಣ್ಣನ್ನು ಕುಕ್ಕಿಸುವ ಕೋಲ್ಮಿಂಚು ಅವರಿಗೆ ಆಕರ್ಷಕವೆನಿಸುತ್ತದೆ. ಆದುದರಿಂದ ಸಾಮೂಹಿಕ ಕ್ರಾಂತಿಯ ತತ್ವವು ಹಿಂದೆ ಬಿದ್ದು ವ್ಯಕ್ತಿಗತ ಸಾಹಸಕೃತ್ಯಗಳಲ್ಲಿಯೇ ಕ್ರಾಂತಿಕಾರಿಗಳು ಜೀವನದ ಸಾಫಲ್ಯವನ್ನು ಕಂಡುಕೊಳ್ಳುತ್ತಾರೆ. ತತ್ಪರಿಣಾಮವಾಗಿ ಅದ್ಭುತ ಸಾಹಸವು ಕ್ರಾಂತಿಪಕ್ಷದ ಕೀರ್ತಿಯನ್ನು ಹೆಚ್ಚಿಸುವ ಕೃತಿಯೆಂದೂ, ಆತ್ಮಾರ್ಪಣವು ಜನತೆಯನ್ನು ಕ್ರಾಂತಿಯುದ್ಧಕ್ಕೆ ಪ್ರವೃತ್ತ ಮಾಡುವ ಮಾರ್ಗವೆಂದೂ ತಿಳಿಯುವ ಬಲಿದಾನದ ಸಿದ್ಧಾಂತವು ಸ್ವೀಕೃತವಾಯಿತು. ತಮ್ಮ ಅಂಗೀಕೃತ ಧ್ಯೇಯವನ್ನು ಸಾಧಿಸುವುದಕ್ಕಾಗಿ ಅವಶ್ಯಕ ಹಾಗೂ ಯೋಗ್ಯವಾದ ಮಾರ್ಗವನ್ನು ಅನುಸರಿಸುತ್ತಿರುವಾಗ ಪ್ರಸಂಗ ಬಂದರೆ ಪ್ರಾಣತ್ಯಾಗವನ್ನು ಮಾಡುವುದು ಅನಿವಾರ್ಯವೂ ಅತ್ಯಾವಶ್ಯಕವೂ ಇರುತ್ತದೆ. ನಾವು ಕಲ್ಪಿಸಬಹುದಾದ ಅತ್ಯಂತ ಬಿಕ್ಕಟ್ಟಿನ ಪ್ರಸಂಗ, ಪ್ರತ್ಯಕ್ಷ ಪ್ರಾಣವನ್ನು ತ್ಯಜಿಸುವ ಪ್ರಸಂಗವು ಬಂದರೂ ಸಹ ಹಿಂಜರಿಯದೆ ಕರ್ತವ್ಯ ಪಥದಲ್ಲಿ ಮುಂದುವರಿಯುವುದು, ಸರ್ವಸ್ವಾರ್ಪಣಬುದ್ಧಿ

ಯಿಂದ ಧ್ಯೇಯದೇವನನ್ನು ಸಾಧಕನಂತೆ ಅರ್ಚಿಸುತ್ತಿರುವಾಗ ಪ್ರಸಂಗ ಬಂದರೆ ಈ ದೇಹಪುಷ್ಪವನ್ನೇ ಆತನಿಗೆ ಅರ್ಪಿಸುವುದು ತ್ಯಾಗದ ಪರಿಶೀಮೆ ಯೆಂದು ಪರಿಗಣಿಸುತ್ತದೆ. ಆದರೆ ಕ್ರಾಂತಿಕಾರಿಗಳು ಆತ್ಮಾರ್ಪಣವೆಂದರೇನೇ ತ್ಯಾಗ, ಪ್ರಾಣದಾನವೆಂದರೇನೇ ಜೀವನಸಮರ್ಪಣವೆಂದು ತಿಳಿಯುತ್ತಾರೆ. ಬಲಿದಾನವೊಂದೇ ಧ್ಯೇಯಸಾಧನೆಯ ಮಾರ್ಗವೆಂದು ತಿಳಿಯುತ್ತಾರೆ. ಮತ್ತು ಆ ಬಲಿದಾನಕ್ಕೆ ಅನುಕೂಲ ಸಂದರ್ಭವನ್ನು ಪ್ರಾಪ್ತಮಾಡಿಕೊಳ್ಳಲು ಹೆಣಗುತ್ತಾರೆ. ಬಲಿದಾನದಲ್ಲಿಯೇ ಜೀವನದ ಪರಿಪೂರ್ಣತೆಯಿದೆಯೆಂದು ಭಾವಿಸುತ್ತಾರೆ. ಮತ್ತು ಜೀವನದಲ್ಲಿಯ ಕರ್ತೃತ್ವ, ಆ ಕರ್ತೃತ್ವದಿಂದ ಸಾಧಿಸ ಬಹುದಾದ ಕಾರ್ಯ, ಕಠಿಣ ಬಿಕ್ಕಟ್ಟಿನಲ್ಲಿಯೂ ಸ್ಥಿರವಾಗಿ ನಿಂತು ಜನತೆಗೆ ಮಾಡಬಹುದಾದ ಮಾರ್ಗದರ್ಶನ, ಸ್ವಂತದ ಆಚರಣೆಯಿಂದ ಧ್ಯೇಯನಿಷ್ಠ ದೇಶಸೇವಕರನ್ನು ನಿರ್ಮಿಸಬಹುದಾದ ಚಿರಂತನ ಸ್ಫೂರ್ತಿ—ಇವುಗಳನ್ನು ದುರ್ಲಕ್ಷಿಸುತ್ತಾರೆ. ಧೀರತನದಿಂದ ಸತತ ಪ್ರಯತ್ನಮಾಡಿ ದೇಶಾದ್ಯಂತವೂ ದೇಶಭಕ್ತಿಯ ಜ್ವಾಲೆಯನ್ನು ಪ್ರಜ್ವಲಿಸಿ ಅಮಂಗಲ ಹಾಗೂ ಅಪವಿತ್ರವಾದು ದೆಲ್ಲವನ್ನೂ ಸುಟ್ಟು ಮಂಗಲಮಯವಾದ ರಾಷ್ಟ್ರೋತ್ಕರ್ಷವನ್ನು ಸಾಧಿಸುವು ದರಲ್ಲಿಯೂ ಜೀವನದ ಸಫಲತೆಯೂ ಪರಿಪೂರ್ಣತೆಯೂ ಇದೆಯೆಂಬುದನ್ನು ಮರೆಯುತ್ತಾರೆ. ಸತತ ಪ್ರಯತ್ನದಿಂದ ಜನತೆಯ ಮುಕ್ತಿಯನ್ನು ಪ್ರತ್ಯಕ್ಷ ಗೊಳಿಸಿದ ಕ್ರಾಂತಿಕಾರಿಗಳೂ ಇದ್ದಾರೆ. ಆದರೆ ಅವರು ಅಪವಾದಾತ್ಮಕರು. ಹೆಚ್ಚಿನ ಕ್ರಾಂತಿಕಾರಿಗಳ ಜೀವನವು ಅದ್ಭುತರಮ್ಯತೆಯ ಆಕರ್ಷಣೆ ಹಾಗೂ ಬಲಿದಾನದ ಸಿದ್ಧಾಂತಗಳಿಂದಲೇ ರೂಪುಗೊಂಡಿದೆ.

ಭಗತ್‌ಸಿಂಗನ ಸೋಷಲಿಸ್ಟ್ ರಿಪಬ್ಲಿಕನ್ ಅಸೋಶಿಯೇಷನ್ನಿನಲ್ಲಿಯೂ ಈ ಬಲಿದಾನದ ಸಿದ್ಧಾಂತವೇ ಪ್ರಭಾವಶಾಲಿಯಾಗಿತ್ತು. ಸ್ಯಾಂಡರ್ಸನ ಕೊಲೆ ಯಿಂದ ಪಕ್ಷದ ಕೀರ್ತಿಯು ಹೆಚ್ಚಿದ್ದು ನಿಜ. ಆದರೆ ತನ್ನ ಕೀರ್ತಿಗೆ ತಕ್ಕಂತೆ ಮತ್ತೆ ಕೃತಿಯನ್ನು ಮಾಡುವುದು ಕ್ರಾಂತಿಪಕ್ಷಕ್ಕೆ ಅನಿವಾರ್ಯವೇ ಆಗಿತ್ತು. ಕೊರಳಲ್ಲಿ ಮೃತ್ಯುವಿನ ಪಾಶವನ್ನು ಧರಿಸಿ ಗಲ್ಲಿನ ವೇದಿಕೆಯನ್ನೇರಿದ ಕ್ರಾಂತಿ ವೀರನೊಬ್ಬನು ದೇಶಕ್ಕೆ ಕ್ರಾಂತಿಯ ಸಂದೇಶವನ್ನು ಕೊಟ್ಟು ಯುವಕರಲ್ಲೆಲ್ಲ ವಿದ್ಯುತ್ಸಂಚಾರ ಮಾಡಿಸಬೇಕೆಂದು ಪಕ್ಷದ ಇಚ್ಛೆಯಾಗಿತ್ತು. ಆದಕ್ಕೆ ಅನು ಕೂಲ ಸಂದರ್ಭವನ್ನು ಶೋಧಿಸುವ ಯೋಚನೆಯು ಕ್ರಾಂತಿಕಾರಿಗಳಲ್ಲಿ ಸತತ

ನಡೆದಿತ್ತು. ಇದೇ ಸಮಯಕ್ಕೆ ಮುಂಬೈಯಲ್ಲಿ ಗಿರಣಿ ಕಾರ್ಮಿಕರ ಸಂಘಗಳು ತಮ್ಮ ಮಾಲಿಕರೊಡನೆ ತೀವ್ರವಾಗಿ ಹೋರಾಟವನ್ನು ನಡೆಸಿದ್ದವು. ಈ ಸಂದರ್ಭದಲ್ಲಿ ಭಾರತ ಸರಕಾರವು ಒಮ್ಮೆಲೆ ಸಾಮ್ಯವಾದಿ ಕಾರ್ಯಕರ್ತರನ್ನೆಲ್ಲ ದಸ್ತಗಿರಿ ಮಾಡಿತು. ಇಷ್ಟೇ ಅಲ್ಲದೆ ಅವರನ್ನೆಲ್ಲ 'ಮೀರತ್ ಒಳಸಂಚಿನ ಮೊಕದ್ದಮೆ' ಯಲ್ಲಿ ಸೇರಿಸಿ ಶಿಕ್ಷೆಗೆ ಗುರಿ ಮಾಡುವ ಆಲೋಚನೆ ವರಿಷ್ಠ ಅಧಿಕಾರಿಗಳದ್ದಿದೆಯೆಂಬುದೂ ಜನರಿಗೆ ಗೊತ್ತಾಯಿತು. ಈ ದಸ್ತಗಿರಿಗಳಿಂದಷ್ಟೇ ಸರಕಾರದ ಕ್ರಮವು ಪೂರ್ಣವಾಗಲಿಲ್ಲ. ಕಾರ್ಮಿಕರ ಆಂದೋಲನಗಳನ್ನು ತಡೆಗಟ್ಟುವುದಕ್ಕಾಗಿ ಕೇಂದ್ರ ಸರಕಾರವು 'Trades Dispute Bill' ಎಂಬ ಮಸೂದೆಯನ್ನು ವಿಧಾನ ಸಭೆಯಲ್ಲಿ ಮಂಡಿಸಿತು. ಇದಲ್ಲದೆ ತನ್ನ ಮನಸ್ಸಿಗೆ ಬಂದ ಸಾರ್ವಜನಿಕ ಕಾರ್ಯಕರ್ತರನ್ನು ಆವಶ್ಯಕತೆ ತೋರಿದಾಗಲೆಲ್ಲ ಸೆರೆಮನೆಗೆ ಅಟ್ಟಲು ಅನುಕೂಲವಾಗುವಂತೆ Public Safety Bill ಎಂಬ ಮಸೂದೆಯನ್ನೂ ಸರಕಾರವು ಸಿದ್ಧಗೊಳಿಸಿತು. ಈ ಪ್ರಕ್ಷುಬ್ಧ ಪರಿಸ್ಥಿತಿಯ ಲಾಭವನ್ನು ಪಡೆಯಬೇಕೆಂದು ಕ್ರಾಂತಿಪಕ್ಷದವರು ನಿರ್ಣಯಿಸಿದರು.

ದೆಹಲಿಯಲ್ಲಿ ಕ್ರಾಂತಿಪಕ್ಷದ ಕೇಂದ್ರ ಸಮಿತಿಯ ಸಭೆ ಸೇರಿತು. ಕಾರ್ಮಿಕರ ಮತ್ತು ರೈತರ ಆಂದೋಲನಗಳಿಗೆ ತಮ್ಮ ಪಕ್ಷದ ಸಹಾನುಭೂತಿಯಿದೆಯೆಂಬುದನ್ನು ವ್ಯಕ್ತಮಾಡುವಂತಹ ಕಾರ್ಯಗಳನ್ನೆತ್ತಿಕೊಳ್ಳಬೇಕೆಂದು ಭಗತ್‌ಸಿಂಗನು ಪಕ್ಷಕ್ಕೆ ಯಾವಾಗಲೂ ಒತ್ತಾಯಪಡಿಸುತ್ತಿದ್ದನು. Trades Dispute Bill ಮತ್ತು Public Safety Bill ಇವುಗಳನ್ನು ನಿಷೇಧಿಸಿ ಪ್ರತಿಭಟನೆ ಸೂಚಿಸಲು ಕೇಂದ್ರ ವಿಧಾನ ಸಭೆಯಲ್ಲಿ ಬಾಂಬ್ ಹಾಕಬೇಕೆಂದು ನಿರ್ಣಯವಾಯಿತು. ಈ ಕೃತ್ಯದಿಂದ ಪ್ರಪಂಚದ ಗಮನವು ಹಿಂದುಸ್ಥಾನದ ಕಡೆಗೆ ಸೆಳೆಯಲ್ಪಡುವುದು ಮತ್ತು ಅದರ ಶ್ರೇಯಸ್ಸು ಕ್ರಾಂತಿಪಕ್ಷಕ್ಕೆ ದೊರೆಯುವುದು. ತಮ್ಮ ಈ ಸಾಹಸ ಕಾರ್ಯದಿಂದ ಯುವಕರಲ್ಲಿ ನವಚೈತನ್ಯವು ಸಂಚರಿಸುವುದು ಮತ್ತು ಕ್ರಾಂತಿಕಾರ್ಯವು ಮುಂದುವರಿಯುವುದು. ಭಾರತದಲ್ಲಿ ಕ್ರಾಂತಿಕಾರಿಗಳ ಗೌರವವು ಹೆಚ್ಚಿ ಸಾಮಾನ್ಯ ಜನತೆಯ ಸಹಾನುಭೂತಿ ಸಹಕಾರಗಳು ತಮಗೆ ದೊರೆಯುವವು—ಹೀಗೆ ಅನೇಕ ವಿಧ ಕಾರ್ಯ ಸಾಧಿಸುವುದೆಂದು ಕ್ರಾಂತಿಕಾರಿಗಳು ಎಣಿಸಿದ್ದರು. ಆದುದರಿಂದ ಈ ಕಾರ್ಯವನ್ನು ನೆರವೇರಿಸಲು ಇಬ್ಬರು ಕೀರ್ತಿಶಾಲಿಗಳಾದ ಕ್ರಾಂತಿವೀರರನ್ನು ನಿಯ

ಮಿಸುವುದು ಯೋಗ್ಯವೆಂದು ಅವರು ಆಲೋಚಿಸಿದರು. ಅದಕ್ಕನುಸರಿಸಿ ದೆಹಲಿಯ ಸಭೆಯಲ್ಲಿಯೇ ಶ್ರೀ ಬಟುಕೇಶ್ವರ ದತ್ತನೊಬ್ಬನನ್ನು ಈ ಕೆಲಸಕ್ಕೆ ನಿಯಮಿಸಲಾಯಿತು. ಬೇರೆ ಯಾರನ್ನು ನಿಯಮಿಸಬೇಕೆಂಬುದರ ನಿರ್ಣಯ ವಾಗದೇನೇ ಸಭೆಯು ಕೊನೆಗಂಡಿತು. ಆದರೆ ಸದಸ್ಯರ ತಲೆಯಲ್ಲಿ ಮಾತ್ರ ಆದೊಂದೇ ಆಲೋಚನೆ ಸುಳಿಯುತ್ತಿತ್ತು.

ಈ ಕಾರ್ಯವನ್ನು ನೆರವೇರಿಸಲು ಭಗತ್‌ಸಿಂಗನೇ ಪೂರ್ಣ ಯೋಗ್ಯತೆ ಯವನೆಂದು ಬಗೆದು ಆತನ ಜೀವದ ಗೆಳೆಯನೊಬ್ಬನು ಭಗತ್‌ಸಿಂಗನಿಗೆ ಈ ಕೆಲಸವನ್ನು ಅಂಗೀಕರಿಸಲು ಒತ್ತಾಯಪಡಿಸಿದನು. ಭಗತ್‌ಸಿಂಗನಾದರೂ ತನ್ನ ಆಪ್ತಸ್ನೇಹಿತನ ಈ ಸೂಚನೆಯನ್ನು ಸ್ವೀಕರಿಸಿದನು. ಈ ಸಂದರ್ಭದಲ್ಲಿ ತನ್ನ ಆ ಪ್ರಾಣಪ್ರಿಯ ಗೆಳೆಯನಿಗೆ ಭಗತ್‌ಸಿಂಗನು ಬರೆದ ಓಲೆಯು ಆತನ ನಡತೆಯ ಸೂಕ್ಷ್ಮ ಭಾಗವೊಂದನ್ನು ಬೆಳಕಿಗೆ ತರುತ್ತದೆ. ಬಾಹ್ಯದಲ್ಲಿ ಭಗತ್‌ಸಿಂಗನು ಭಾವನಾಶೂನ್ಯ ಮನುಷ್ಯನಂತೆ ಕಾಣುತ್ತಿದ್ದನು. ಆದರೆ ಚಿರವಿಯೋಗದ ಸಮಯದಲ್ಲಿ ಬರೆದ ಈ ಓಲೆಯು ಸ್ನೇಹ ಮತ್ತು ಭಾವನೋತ್ಕಟತೆಗಳ ರಮಣೀಯ ಪ್ರತೀಕವಾಗಿದೆ. ಚಿರವಿರಹವಾಗುವುದು ಖಚಿತ ವಾಗಿದ್ದುದರಿಂದ ಆ ಪತ್ರರತ್ನದಲ್ಲಿ ಭಗತ್‌ಸಿಂಗನು ತನ್ನ ಹೃದಯದಲ್ಲಿನ ಆಂತರಿಕ ಭಾವನೆಗಳೆಲ್ಲವನ್ನೂ ಅಕ್ಷರದಲ್ಲಿರಿಸಿರುವನು. ಆ ಪತ್ರವನ್ನು ಬರೆಯುತ್ತಿದ್ದಾಗ ಅವನು ಒಮ್ಮೆ ಸ್ನೇಹಸರಸ್ಸಿನಲ್ಲಿ ಮುಳುಗುತ್ತಿದ್ದರೆ ಮತ್ತೊಮ್ಮೆ ತನ್ನ ಮುಂದಿನ ಕಾರ್ಯದ ದೃಶ್ಯವನ್ನು ನೋಡುವುದರಲ್ಲಿ ಮಗ್ನನಾಗುತ್ತಿದ್ದನು. ಅವನ ಸ್ನೇಹಭಾವನೆ ಮತ್ತು ಕರ್ತವ್ಯಬುದ್ಧಿ ಇವುಗಳಲ್ಲಿ ದ್ವಂದ್ವ ನಡೆಸಿರಲು ಸಾಕು. ಈ ವಿಷಯವನ್ನು ಕುರಿತು ಅವನು Step Naik ನ "Career of a Nihilist" ( ಶೂನ್ಯವಾದಿಯ ಚರಿತ್ರೆ ) ಎಂಬ ತನ್ನ ಪ್ರೀತಿಯ ಪುಸ್ತಕದೊಳಗಿನ ಅವತರಣಿಕೆಗಳನ್ನು ಕೊಟ್ಟಿದ್ದಾನೆ. ಅದೇ ಪತ್ರದಲ್ಲಿ ಕ್ರಾಂತಿಕಾರಿಯ ಜೀವನದಲ್ಲಿ ಸ್ನೇಹಕ್ಕೆ ಸ್ಥಾನವಿಲ್ಲವೆಂಬ ತನ್ನ ನಂಬಿಕೆಯನ್ನೂ ವಿಶದಪಡಿಸಿದ್ದಾನೆ. ದುರಾದೃಷ್ಟದಿಂದ ಈ ಅಮೂಲ್ಯ ಪತ್ರವು ಮೋಝಾನಿ ಹೌಸ್ ಬಾಂಬ್ ಫ್ಯಾಕ್ಟರಿಯಲ್ಲಿ ಪೋಲೀಸರ ವಶವಾಯಿತು. ಇರಲಿ.

ಭಗತ್‌ಸಿಂಗನೂ ಬಟುಕೇಶ್ವರ ದತ್ತನೂ ಕೇಂದ್ರ ವಿಧಾನ ಸಭೆಯಲ್ಲಿ ಬಾಂಬ್ ಎಸೆದು ಸರಕಾರದ ನಿಷೇಧವನ್ನು ಮಾಡಬೇಕು, ಅಲ್ಲಿ ಪೋಲೀಸು ಅಧಿಕಾರಿಗಳ ವಶವಾಗಬೇಕು, ನ್ಯಾಯಾಸ್ಥಾನದಲ್ಲಿ ಧೈರ್ಯದಿಂದ ಕ್ರಾಂತಿಯ ತತ್ವದ ನಿಲುವೆಯನ್ನು ವಿಶದಪಡಿಸಬೇಕು ಮತ್ತು ಕೊನೆಗೆ ಆತ್ಮ ಬಲಿದಾನವನ್ನು ಮಾಡಿ ದೇಶದ ಯುವಕರಿಗೆಲ್ಲ ಕ್ರಾಂತಿಯ ಅಮರ ಸಂದೇಶವನ್ನು ಬೀರಬೇಕು ಎಂಬ ಯೋಜನೆಯು ನಿಶ್ಚಿತವಾಯಿತು. ಅದಕ್ಕನುಸಾರವಾಗಿ ಭಗತ್‌ಸಿಂಗನು ಮುಂದಿನ ಕಾರ್ಯಕ್ರಮಗಳ ಯೋಜನೆಯನ್ನು ಮಾಡಿದನು. ಕೇಂದ್ರ ವಿಧಾನ ಸಭೆಯಲ್ಲಿ ಪ್ರವೇಶ ದೊರಕಿಸುವದು ಮೊದಲನೆಯ ಕೆಲಸವಾಗಿತ್ತು. ಅದೇ ರೀತಿ ಅಲ್ಲಿ ಪ್ರವೇಶ ದೊರೆತ ಮೇಲೆ ತಮ್ಮ ಬಗ್ಗೆ ಯಾರಿಗೂ ಅನುಮಾನ ಉಂಟಾಗದಂತೆ ವ್ಯವಸ್ಥೆ ಮಾಡುವುದೂ ಅವಶ್ಯವಾಗಿತ್ತು. ಆದ್ದರಿಂದ ಅವರಿಬ್ಬರೂ ಪ್ರೇಕ್ಷಕರ ಪ್ರವೇಶಪತ್ರಗಳನ್ನು ದೊರಕಿಸಿದರು ಅಲ್ಲದೆ ಅವರು ಸಂಪೂರ್ಣವಾಗಿ ಐರೋಪ್ಯ ಪದ್ಧತಿಯ ಉಡುಪನ್ನು ಧರಿಸಿ ಸಭಾಭವನಕ್ಕೆ ಹೋಗುತ್ತಿದ್ದರು. ಬಾಗಿಲಲ್ಲಿ ನಿಂತ ಪೋಲೀಸು ಸಾರ್ಜಂಟರಿಗೆ ಗೊತ್ತಾಗದೆ ಭಗತ್‌ಸಿಂಗ್-ದತ್ತರು ಅಸೆಂಬ್ಲಿ ಚೆಂಬರಿನಲ್ಲಿ ಪ್ರವೇಶವನ್ನು ಹೇಗೆ ದೊರಕಿಸಿದರೆಂಬುದು ಪೋಲೀಸರಿಗೆ ಆಶ್ಚರ್ಯದ ವಿಷಯವಾಗಿದೆ. ಆದರೆ ಅವರಿಬ್ಬರೂ ಪ್ರತ್ಯಕ್ಷ ಬಾಂಬ್ ಎಸೆಯುವ ಮೊದಲು ಮೂರು ದಿನಗಳಿಂದ ತಪ್ಪದೆ ಸಭಾಭವನಕ್ಕೆ ಹೋಗುತ್ತಿದ್ದರೆಂಬುದು ಪೋಲೀಸರಿಗೆ ಈವೊತ್ತಿಗೂ ಗೊತ್ತಿಲ್ಲ. ಒಂದು ಜೋಬಿನಲ್ಲಿ ಸಂಪೂರ್ಣ ಸಿದ್ಧವಾದ ಬಾಂಬನ್ನೂ ಇನ್ನೊಂದರಲ್ಲಿ ತುಂಬಿದ ಪಿಸ್ತೂಲನ್ನೂ ಇಟ್ಟುಕೊಂಡು ಅವರು ಅತ್ಯಂತ ಶಾಂತತೆಯಿಂದಲೂ ಲಕ್ಷ್ಯಪೂರ್ವಕವಾಗಿಯೂ ವಿಧಾನ ಸಭೆಯಲ್ಲಿ ಚರ್ಚೆಯನ್ನು ಕೇಳುತ್ತಿದ್ದರು. ಬಾಂಬ್ ಎಸೆಯಲು ಯೋಗ್ಯವಾದ ಅತಿ ಮಹತ್ವದ ಸಮಯವನ್ನು ಅವರು ನಿರೀಕ್ಷಿಸುತ್ತಿದ್ದರು. ಮತ್ತು ಅಂತಹ ಸಮಯ ಬಂದದ್ದೊಂದೇ ತಡ. ಒಂದು ಬೆಂಕಿಯ ಕಡ್ಡಿಯನ್ನು ಕೊರೆಯುವ ಹಾಗೆ ತೀರ ಸುಲಭವಾಗಿ ಮತ್ತು ಸಹಜವಾಗಿ ಅವರು ಸಭಾಭವನದಲ್ಲಿ ಬಾಂಬ್ ಎಸೆದರು.

ಅಂದು ೧೯೨೯ನೇ ಇಸ್ವಿಯ ಎಪ್ರಿಲ್ ೮ನೆಯ ದಿನಾಂಕವಾಗಿತ್ತು. ವಿಧಾನಸಭೆಯಲ್ಲಿ ಟ್ರೇಡ್ಸ್ ಡಿಸ್ಪ್ಯೂಟ್ ಬಿಲ್ಲಿನ ಚರ್ಚೆ ನಡೆದಿತ್ತು. ಮುಂಬೈ

ಯಲ್ಲಿ ಕಾರ್ಮಿಕರ ಆಂದೋಳನಕ್ಕೆ ಕೊಂಚ ಮಟ್ಟಿಗೆ ಯಶಸ್ಸು ಬಂದದ್ದನ್ನು ನೋಡಿ ಕಾರ್ಮಿಕರ ಆಂದೋಳನಗಳನ್ನೇ ನಿಯಂತ್ರಿಸುವ ಮಸೂದೆಯನ್ನು ಭಾರತ ಸರಕಾರವು ಅವಸರದಿಂದ ಪಾಸು ಮಾಡಿಕೊಳ್ಳುವ ಗಡಿಬಿಡಿಯ ಲ್ಲಿತ್ತು. ಅಂತಹ ಆ ಸಂದರ್ಭದಲ್ಲಿ ರಾಜಧಾನಿಯಾದ ದೆಹಲಿ ನಗರವು ಒಂದು ದೃಶ್ಯವನ್ನು ಕಂಡಿತು. ಇದ್ದಕ್ಕಿದ್ದಂತೆಯೇ ಒಂದು ಪ್ರಚಂಡ ಶಬ್ದ ವಾಯಿತು. ವಿಧಾನ ಸಭೆಯಲ್ಲಿಯ ವೀರ ಸದಸ್ಯರೆಲ್ಲ ಭೂತವು ಬೆನ್ನುಹತ್ತಿ ದವರಂತೆ ಪಕ್ಕದ ಕೋಣೆಯಲ್ಲಿ ಅವಿತುಕೊಳ್ಳಲು ದಟ್ಟಣೆ ಮಾಡಿದರು. ಕೆಲ ವರು ಸುರಕ್ಷಿತೆಗಾಗಿ ಸಂಡಾಸವನ್ನು ಸಹ ಸೇರಿದರು. ಎರಡೂ ಬಾಂಬ್ ಬಿದ್ದ ಸ್ಥಳದಲ್ಲಿ ತಗ್ಗುಗಳಾದವು. ಹತ್ತಿರದ ಬಾಕುಗಳು ಒಡೆದು ಚೂರಾದವು. ಯಾರಿಗೂ ಗಾಯಗಳಾಗಲಿಲ್ಲ. ಆದರೆ ಕೆಲವರಿಗೆ ಮಾತ್ರ ಕೊಂಚ ತೆರೆದಂತಾಯಿತು. ಸಭಾಭವನದಲ್ಲೆಲ್ಲ ಹೊಗೆಯು ತುಂಬಿತ್ತು. ಮತ್ತು ಸದಸ್ಯರು ಓಡಾಡುವ ಗೊಂದಲ ನಡೆದಿತ್ತು.

ಈ ಅನಿರೀಕ್ಷಿತ ಪ್ರಸಂಗದಿಂದ ಭಯಾನಕ ದೃಶ್ಯವುಂಟಾಗಿದ್ದರೂ ಕೆಲವು ಸದಸ್ಯರು ತಮ್ಮ ಸ್ಥಳಗಳಲ್ಲಿಯೇ ಕೂತುಕೊಂಡಿದ್ದರು. ಅವರಲ್ಲಿ ಪ್ರಮುಖರೆಂದರೆ ಪಂಡಿತ್ ಮೋತೀಲಾಲ್ ನೆಹರೂ, ಪಂಡಿತ ಮದನ ಮೋಹನ ಮಾಲವೀಯ ಮತ್ತು ಸರ್ ಜೇಮ್ಸ್ ಕೇರಾರ್. ಪ್ರೇಕ್ಷಕರ ಗ್ಯಾಲರಿಯೂ ಬರಿದಾಗಿತ್ತು. ಆದರೆ ಅಕೋ! ಅಲ್ಲಿ ಇಬ್ಬರು ಯುವಕರು ಶಾಂತವಾಗಿಯೂ ನಿರ್ಭಯವಾಗಿಯೂ ನಿಂತಿರುವುದು ಕಂಗೊಳಿಸುತ್ತಿದೆ. ಅವರೇ ಆ ಇಬ್ಬರು ಚಾರಿತ್ರಿಕ ಪುರುಷರು. ಭಗತ್‌ಸಿಂಗ ಮತ್ತು ಬಟು ಕೇಶ್ವರ ದತ್ತ!

ಮನಸ್ಸು ಮಾಡಿದ್ದರೆ ಅವರಿಬ್ಬರೂ ಅಲ್ಲಿಂದ ಸುಲಭವಾಗಿ ಜಾರಿ ಹೋಗಬಹುದಿತ್ತು. ಆದರೆ ಯಾವ ಬಗೆಯ ಪ್ರತಿಕಾರವನ್ನೂ ಮಾಡದೆ ಪೋಲೀಸರ ವಶವಾಗುವುದು ಅವರು ಮೊದಲೇ ವಿಚಾರಪೂರ್ವಕ ವಾಗಿ ನಿಶ್ಚಯಿಸಿದ ಯೋಜನೆಯ ಒಂದು ಭಾಗವಾಗಿತ್ತು. ಆದುದರಿಂದ ಅವರು ತಮ್ಮ ಬಂಧನದ ಮಾರ್ಗಪ್ರತೀಕ್ಷೆಯನ್ನು ಮಾಡುತ್ತ ಧೀರಗಂಭೀರ ವಾಗಿ ನಿಂತುಕೊಂಡರು.

ಅವರು ಬಯಸಿದ್ದರೆ ಎಚ್ಚರವಿಲ್ಲದೆ ಓಡುತ್ತಿದ್ದ ಭಯಭೀತ ಸರಕಾರಿ ಅಧಿಕಾರಿಗಳಲ್ಲಿ ಕೆಲವರನ್ನು ಗುಂಡಿಕ್ಕಿ ಕೊಲ್ಲುವುದೂ ಅವರಿಗೆ ಸಹಜ ಸಾಧ್ಯವಿತ್ತು. ಯಾಕಂದರೆ ಇಬ್ಬರ ಹತ್ತಿರವೂ ತುಂಬಿದ ಪಿಸ್ತೂಲುಗಳಿದ್ದವು. ಆದರೆ ಅವರು ಅಂತಹ ಯಾವ ಕೃತ್ಯವನ್ನೂ ಮಾಡಲಿಲ್ಲ. ಈಗ ಅವರಿಗೆ ಸೇಡನ್ನು ತೀರಿಸಿಕೊಳ್ಳುವುದಿದ್ದಿಲ್ಲ, ಅಥವಾ ದ್ವೇಷವನ್ನು ಸಾಧಿಸುವುದಿದ್ದಿಲ್ಲ. ಆದರೆ ಲೋಕದ ಗಮನವನ್ನು ಸೆಳೆಯುವುದಿತ್ತು, ಸರಕಾರವನ್ನು ಎಚ್ಚರಿಸುವುದಿತ್ತು, ಜನತೆಯ ನಾಯಕರನ್ನು ಜಾಗೃತಗೊಳಿಸುವುದಿತ್ತು, ಮತ್ತು ಯುವಕರಲ್ಲಿ ಚೈತನ್ಯವನ್ನು ತುಂಬುವುದಿತ್ತು. ಈ ಎಲ್ಲ ಕೆಲಸಗಳನ್ನು ಸಾಧಿಸುವುದಕ್ಕೋಸ್ಕರ ಅವರು ಆತ್ಮಬಲಿದಾನ ಮಾಡಲು ಸಿದ್ಧರಾಗಿ ಬಂದಿದ್ದರು.

ಗಡಿಬಿಡಿಯು ಸ್ವಲ್ಪ ಶಾಂತವಾಗುತ್ತಲೂ ಅವರು "ಕ್ರಾಂತಿಯು ಚಿರಾಯುವಾಗಲಿ!" "ಸಾಮ್ರಾಜ್ಯಶಾಹಿಯು ನಾಶವಾಗಲಿ!" ಎಂಬ ಜಯಘೋಷಗಳನ್ನು ಮಾಡಲಾರಂಭಿಸಿದರು. ಮತ್ತು ಅದರ ಯೋಜನೆಗೇ "ಹಿಂದುಸ್ಥಾನ ಸೋಷಲಿಸ್ಟ ರಿಪಬ್ಲಿಕನ್ ಅಸೋಶಿಯೇಷನ್" ಎಂದು ಕೆಂಪು ಶಾಯಿಯಲ್ಲಿ ಬರೆದ ತಲೆಬರೆಹದ ಪತ್ರಕಗಳ ಪುಡಿಕೆಗಳನ್ನು ಎಸೆಯಲಾರಂಭಿಸಿದರು. ಸ್ಯಾಂಡರ್ಸನ ಕೊಲೆಯಾದಾಗ ಉಪಯೋಗಿಸಿದ ಶಾಯಿಯಿಂದಲೇ ಈ ಪತ್ರಕದ ತಲೆಬರಹವನ್ನೂ ಬರೆಯಲಾಗಿತ್ತು. "ಕಿವುಡನಿಗೆ ಕೇಳಿಸಬೇಕಾದರೆ ಧ್ವನಿಯು ಪ್ರಚಂಡವಿರಬೇಕಾಗುತ್ತದೆ." ಎಂದು ಆ ಪ್ರಕಟನೆಯ ಆರಂಭದ ವಾಕ್ಯವಿತ್ತು. ಫ್ರೆಂಚ ಅರಾಜಕನಾದ ಡ್ಯಾಲಿಯೆಂಟನ ಕೃತ್ಯವೊಂದನ್ನು ಉದಾಹರಣೆಗಾಗಿ ಕೊಟ್ಟು ಅವರು ತಮ್ಮ ಕೃತಿಯನ್ನು ಸಮರ್ಥಿಸಿಕೊಂಡಿದ್ದರು. ಕೊನೆಯಲ್ಲಿ "ಜನತೆಯ ಪ್ರತಿನಿಧಿಗಳು ತಮ್ಮ ತಮ್ಮ ಮತದಾರ ಸಂಘಗಳಿಗೆ ಹೋಗಿ ಬರಲಿರುವ ಕ್ರಾಂತಿಗಾಗಿ ಜನತೆಯನ್ನು ಸಿದ್ಧಗೊಳಿಸಲಿ" ಎಂದು ಪ್ರತಿಪಾದಿಸಲಾಗಿತ್ತು.

ಈ ಪ್ರಕಟನೆಗಳನ್ನು ಎಲ್ಲ ಕಡೆಗೆ ಎಸೆಯುತ್ತಿರುವಾಗಲೇ ಅನೇಕ ಪೋಲೀಸರೊಡನೆ ಇಬ್ಬರು ಸಾರ್ಜಂಟರು ಅಲ್ಲಿಗೆ ಬಂದರು. ಈ ಭಯಂಕರ ಕ್ರಾಂತಿಕಾರಿಗಳು ಪ್ರತಿಭಟನೆಮಾಡಬಹುದೆಂಬ ಅನುಮಾನದಿಂದ ಪೋಲೀಸು ಪಡೆಯು ತುಂಬಾ ಎಚ್ಚರದಿಂದ ಸಿಧಾನವಾಗಿ ಇವರನ್ನು ಬಂಧಿಸುವ ಕೆಲಸ

ಕ್ಷಣಿಯಾಯಿತು. ಪೋಲೀಸರ ಅನುಮಾನವನ್ನು ಅರ್ಥಮಾಡಿಕೊಂಡು ಭಗತ್ ಸಿಂಗ, ದತ್ತ ಇಬ್ಬರೂ ತಮ್ಮ ಪಿಸ್ತೂಲುಗಳನ್ನು ಹತ್ತಿರದ ಖುರ್ಚಿಯ ಮೇಲಿಟ್ಟರು. ಮತ್ತು ತಾವು ಪ್ರತಿಭಟನೆ ಮಾಡುವುದಿಲ್ಲ. ತಮ್ಮನ್ನು ನಿರಾತಂಕವಾಗಿ ಬಂಧಿಸಬಹುದೆಂದು ತಿಳಿಸಿದರು. ಸಾರ್ಜಂಟರು ಮುಂದು ವರಿದು ಅವರನ್ನು ದಸ್ತಗಿರಿ ಮಾಡಿದರು. ಮತ್ತು ಅಲ್ಲಿಂದ ಸೆರೆಮನೆಗೆ ಕೊಂಡೊಯ್ದರು. ಅಲ್ಲಿಂದ ಅವರನ್ನು ತೆಗೆದುಕೊಂಡು ಹೋಗುವಾಗ ಅವ ರಿಬ್ಬರೂ ಮತ್ತೊಮ್ಮೆ "ಕ್ರಾಂತಿಯು ಚಿರಾಯುವಾಗಲಿ!" "ಸಾಮ್ರಾಜ್ಯ ಶಾಹಿಯು ನಾಶವಾಗಲಿ!" ಎಂದು ಉಚ್ಚ ಸ್ವರದಿಂದ ಜಯಘೋಷ ಮಾಡಿ ದರು. ಆ ಜಯಘೋಷವು ಸಭಾಭವನದಲ್ಲೆಲ್ಲ ಪ್ರತಿಧ್ವನಿಗೊಳ್ಳುತ್ತ ಭಯ ಭೀತರಾದ ನೋಟಕರನ್ನು ಆಶ್ಚರ್ಯಗೊಳಿಸಿತು.

ಈ ಅಸೆಂಬ್ಲಿ ಬಾಂಬ್ ಪ್ರಕರಣದ ವಿಚಾರಣೆಯು ಕೂಡಲೆ ಆರಂಭ ವಾಯಿತು. ವಿಚಾರಣೆಯ ವಿಷಯವಾಗಿ ಸ್ವೀಕರಿಸುವ ನಿಲುಮೆಯು ಮೊದಲೇ ನಿಶ್ಚಯವಾಗಿತ್ತು. ಭಗತ್‌ಸಿಂಗ ದತ್ತರಿಗೆ ತಮ್ಮ ರಕ್ಷಣೆ ಮಾಡಿಕೊಳ್ಳುವ ಆಲೋಚನೆಯೇ ಇರಲಿಲ್ಲ. ಈ ವಿಚಾರಣೆಯ ಲಾಭ ಪಡೆದು ಕ್ರಾಂತಿ ಪಕ್ಷದ ಪ್ರಚಾರ ಮಾಡುವುದೇ ಅವರ ಮುಖ್ಯ ಉದ್ದೇಶವಾಗಿತ್ತು. ಮತ್ತು ಅದನ್ನು ಸಾಧಿಸುವಲ್ಲಿ ಭಗತ್‌ಸಿಂಗನು ತನ್ನ ಬುದ್ಧಿಚಾತುರ್ಯವನ್ನು ತೋರಿದನು. "ಕ್ರಾಂತಿಯು ಚಿರಾಯುವಾಗಲಿ!" "ಜನತೆಯು ಚಿರಂಜೀವಿ ಯಾಗಲಿ!" ಎಂಬ ಘೋಷಣೆಗಳನ್ನು ಭಗತ್‌ಸಿಂಗ ದತ್ತರು ಪ್ರತಿ ದಿವಸ ನ್ಯಾಯಾಸ್ಥಾನದಲ್ಲಿ ಪ್ರವೇಶಿಸಿದ ಕೂಡಲೆ ಮಾಡುತ್ತಿದ್ದರು. ಅವರ ಈ ಘೋಷಣೆಯ ಪರಿಣಾಮವಾಗಿ ವಿಚಾರಣೆ ನಡೆದಷ್ಟು ದಿವಸವೆಲ್ಲ ನ್ಯಾಯಾ ಸ್ಥಾನದಲ್ಲಿರುವಾಗ ಅವರಿಗೆ ಬೇಡಿ ಹಾಕುತ್ತಿದ್ದರು. ತಾವು ಕ್ರಾಂತಿಪಕ್ಷದ ಸದಸ್ಯರೆಂದು ಸಾರಿ ಹೇಳುವ ದಿಟ್ಟತನದ ನಿಲುಮೆಯನ್ನು ಅವರು ಅಂಗೀಕರಿ ಸಿದರು. ಮತ್ತು ತಮ್ಮ ಹೇಳಿಕೆಯಲ್ಲಿ ಜನತೆಗಾಗಿ ನಿಜವಾದ ಸ್ವರಾಜ್ಯ ವನ್ನು ಸಂಪಾದಿಸಬೇಕಾದರೆ ಭಾರತೀಯ ಯುವಕರು ಕಾರ್ಮಿಕರನ್ನೂ ರೈತ ರನ್ನೂ ಸಂಘಟಿಸುವ ಕಾರ್ಯಕ್ಕಾಗಿ ತಮ್ಮ ಜೀವನವನ್ನೇ ಮೀಸಲಿಡಬೇ ಕೆಂದು ತಮ್ಮ ಸಂದೇಶವನ್ನು ಬಿತ್ತರಿಸಿದರು.

ಭಗತ್‌ಸಿಂಗನು ಸೆಶನ್ಸ್ ಕೋರ್ಟಿನಲ್ಲಿ ಕೊಟ್ಟ ಹೇಳಿಕೆಯು ಐತಿಹಾ

ಸಿಕ ಮಹತ್ವವುಳ್ಳದ್ದಾಗಿದೆ. ಅಸನ್ನು ಅತ್ಯಂತ ಜಾಣತನದಿಂದ ಬರೆಯಲಾಗಿತ್ತು. ಆ ಹೇಳಿಕೆಯಲ್ಲಿ ಕ್ರಾಂತಿತತ್ವವನ್ನು ವಿವೇಚಿಸಲಾಗಿತ್ತಲ್ಲದೆ ವಿಧಾನ ಸಭೆಯಲ್ಲಿ ತಾವು ಬುದ್ಧಿಪೂರ್ವಕವಾಗಿ ಬಾಂಬ್ ಯಾಕೆ ಎಸೆಯಬೇಕಾಯಿತೆಂಬುದರ ವಿವರಣೆಯನ್ನೂ ಮಾಡಲಾಗಿತ್ತು. ಅದರಂತೆ "ಕ್ರಾಂತಿಯು ಚಿರಾಯುವಾಗಲಿ!" ಎಂಬ ಘೋಷಣೆಯು ಮೂರ್ಖತನದ್ದೆಂದು 'ಮಾಡರ್ನ್ ರಿವ್ಯೂ' ( Modern Review ) ಮಾಡಿದ ಟೀಕೆಗೆ ಸಮರ್ಪಕ ಉತ್ತರವನ್ನೂ ಅದರಲ್ಲಿ ಕೊಡಲಾಗಿತ್ತು

ಇಂತಹ ಐತಿಹಾಸಿಕ ಮಹತ್ವದ ಆ ಹೇಳಿಕೆಯ ಪ್ರಚಾರವನ್ನು ಮಾಡುವುದು ಅತ್ಯಾವಶ್ಯಕವಾಗಿತ್ತು. ಭಾರತೀಯರೆಲ್ಲರ ಅಂತರಂಗದಲ್ಲಿ ಆ ಕ್ರಾಂತಿವೀರನ ಸಂದೇಶವು ಪ್ರವೇಶಿಸಬೇಕು ಮತ್ತು ಅವರ ಆಂತರ್ಯದ ಅನುಕೂಲ ಉತ್ತರವೂ ಕ್ರಾಂತಿಪಕ್ಷಕ್ಕೆ ದೊರೆಯಬೇಕೆಂಬುದೇ ಈ ಎಲ್ಲ ಪ್ರಕರಣದ ಮೂಲೋದ್ದೇಶವಾಗಿತ್ತು. ಇದಲ್ಲದೆ ಪರರಾಷ್ಟ್ರಗಳಿಗೂ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಅನ್ಯಾಯ-ದಬ್ಬಾಳಿಕೆಯ ಅರಿವಾಗಬೇಕು ಮತ್ತು ಅಂತಹ ಅನರ್ಥಕಾರಿ ಸಾಮ್ರಾಜ್ಯಶಾಹಿಯನ್ನು ಕೊನೆಗಾಣಿಸಲು ವೀರ ಕ್ರಾಂತಿಕಾರಿಗಳ ಪಕ್ಷವು ಸಿದ್ಧವಾಗುತ್ತಿದೆಯೆಂಬುದೂ ಅವರಿಗೆ ತಿಳಿಯಬೇಕೆಂದು ಪಕ್ಷದ ಇಚ್ಛೆಯಾಗಿತ್ತು. ಈ ಇಚ್ಛೆಗನುಸರಿಸಿ ಭಗತ್‌ಸಿಂಗನಿಂದ ಆ ಐತಿಹಾಸಿಕ ಹೇಳಿಕೆಯ ಪ್ರಚಾರದ ಯೋಜನೆಯನ್ನು ಕೈಕೊಳ್ಳಲಾಯಿತು. ಆ ಹೇಳಿಕೆಯನ್ನು ನ್ಯಾಯಾಸ್ಥಾನದಲ್ಲಿ ಒಪ್ಪಿಸುವ ಮೊದಲೇ ಅದರ ಪ್ರತಿಗಳನ್ನು ಟೈಪ್ ಮಾಡಿ ಭಾರತದ ಎಲ್ಲ ಪ್ರಮುಖ ವೃತ್ತಪತ್ರಿಕೆಗಳಿಗೆ ಕಳಿಸಲಾಯಿತು. ಅದರಂತೆ ಅದನ್ನು ಭಾರತದ ಹೊರಗೂ ಅನೇಕ ದೇಶಗಳಿಗೆ ಕಳಿಸಲಾಯಿತು. ಇದರ ಪ್ರಯೋಜನವೂ ಆಯಿತು. ಭಾರತದ ಎಲ್ಲ ಪತ್ರಿಕೆಗಳಲ್ಲಿ ಆ ಹೇಳಿಕೆಯು ಏಕಕಾಲಕ್ಕೆ ಪ್ರಕಟವಾಯಿತು. ಆ ಹೇಳಿಕೆಯ ಆ ಮಹತ್ವದ ಭಾಗವನ್ನು ಆಯರ್ಲಂಡಿನ ಕೆಲವು ಪತ್ರಿಕೆಗಳೂ ಪ್ರಕಟಿಸಿದವು ಫ್ರಾನ್ಸಿನ 'ಲಾ ಹೆಮಾಯಿಟ್' ಮತ್ತು ರಷ್ಯಾದ 'ಪ್ರವದಾ' ದಲ್ಲಿ ಅದು ಪ್ರಕಟವಾಯಿತು.

ಒಮ್ಮೆ ಈ ಹೇಳಿಕೆಯು ಪ್ರಸಿದ್ಧವಾದದ್ದೇ ತಡ. ಭಗತ್‌ಸಿಂಗನೇ ಸ್ಥಾಪಿಸಿದ್ದ ನವಜವಾನ್ ಭಾರತ ಸಭೆಯು ಅದರ ಪ್ರಚಾರವನ್ನು ಭರದಿಂದ ಮಾಡಿತು. ಭಗತ್‌ಸಿಂಗ–ದತ್ತರ ಹೇಳಿಕೆಯು ಸಾವಿರಾರು ಪ್ರತಿ

ಗಳನ್ನು ಅವರ ಸುಪರಿಚಿತ ಭಾವಚಿತ್ರಗಳೊಂದಿಗೆ ಭಾರತದಲ್ಲೆಲ್ಲ ಹಂಚಲಾಯಿತು. ಅವರಿಬ್ಬರ ಸಂಕ್ಷಿಪ್ತ ಜೀವನಚರಿತ್ರೆಯನ್ನೂ ಅವರ ಮುದ್ರಿತ ಭಾವಚಿತ್ರಗಳನ್ನೂ ಸ್ವಸಂತೋಷದಿಂದ ಪ್ರಚಾರಕ್ಕಾಗಿ ಮುಂದೆಬಂದ ಕೆಲವು ಪ್ರಮುಖ ಪತ್ರಿಕೆಗಳಿಗೆ ಉಚಿತವಾಗಿ ಕೊಡಲಾಯಿತು. ಹೀಗೆ ಈ ಕೃತ್ಯವು ಅದನ್ನು ಮಾಡಿದವರ ಉದ್ದೇಶವನ್ನು ಪೂರ್ಣವಾಗಿ ಸಫಲಗೊಳಿಸಿತು. ಮುಂಚೆ ಈ ಘಟನೆಯನ್ನು ನಿಂದಿಸಿದ ಸಾರ್ವಜನಿಕ ಮುಂದಾಳುಗಳು ಸಹ ತಮ್ಮ ವಿಧಾನಗಳನ್ನು ತಿದ್ದಹತ್ತಿದರು. ಕ್ರಾಂತಿಪಕ್ಷದ ಗೌರವವು ಹೆಚ್ಚಿತು. ಅವರ ಅಸ್ತಿತ್ವದ ಅರಿವು ವಿಶ್ವದ ಜನತೆಗೆ ಆಯಿತು. ಮತ್ತು ಈ ಇಡೀ ಪ್ರಕರಣದಿಂದ ಯುವಕರ ಭಾವನೆಗಳು ಉದ್ರೇಕಗೊಂಡವು.

## ಅನ್ನಸತ್ಯಾಗ್ರಹ

ಕೇಂದ್ರ ವಿಧಾನ ಸಭೆ ಬಾಂಬ್ ಮೊಕದ್ದಮೆಯ ತೀರ್ಪು ಆಗಿ ಭಗತ್ ಸಿಂಗ ಮತ್ತು ಬಟುಕೇಶ್ವರ ದತ್ತ ಇಬ್ಬರಿಗೂ ಆಜೀವ ಕರಿನೀರಿನ ಶಿಕ್ಷೆ ಆಯಿತು. ಅವರಿಬ್ಬರೂ ದೆಹಲಿಯ ಸೆರೆಮನೆಯಲ್ಲಿಯೇ ಇದ್ದರು. ತಮ್ಮ ವಿಚಾರಣೆಯ ಉಪಯೋಗವನ್ನು ಅವರು ಕ್ರಾಂತಿಪಕ್ಷದ ಪ್ರಚಾರಕ್ಕೆಂದು ಮಾಡಿಕೊಂಡಿದ್ದರು. ತಮ್ಮ ಕಾರಾವಾಸವನ್ನು ಸಹ ಒಂದು ಮಹತ್ವದ ಕೆಲಸಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಅವರು ನಿಶ್ಚಯಿಸಿದರು. ಅದಕ್ಕನುಸರಿಸಿ ತಾವು ಅನ್ನತ್ಯಾಗ ಮಾಡುವ ನಿರ್ಣಯವನ್ನು ಅವರು ಕೈಕೊಂಡರು. ರಾಜಕೀಯ ಕೈದಿಗಳ ವ್ಯವಸ್ಥೆಯಲ್ಲಿ ಯೋಗ್ಯ ಹಾಗೂ ಅನುಕೂಲ ಸುಧಾರಣೆಯಾಗಲೆಂದು ಪ್ರಯತ್ನಿಸುವುದೇ ಅವರ ಈ ಅನ್ನಸತ್ಯಾಗ್ರಹದ ಉದ್ದೇಶವಾಗಿತ್ತು. ತಮ್ಮ ನಿರ್ಣಯವನ್ನು ಪತ್ರಿಕೆಗಳಿಗೆ ತಿಳಿಸುವುದೂ ಅವರಿಗೆ ಸಾಧ್ಯವಾಯಿತು. ಪತ್ರಿಕೆಗಳಾದರೂ ಅವರ ಬೇಡಿಕೆಗಳಿಗೆ ತಮ್ಮ ಬೆಂಬಲವನ್ನಿತ್ತು ಅವುಗಳಿಗೆ ಅನುಕೂಲ ವಾತಾವರಣವಾಗುವಂತೆ ಪ್ರಚಾರವನ್ನಾರಂಭಿಸಿದವು.

ಸಾಮಾನ್ಯ ವಾಚಕರಿಗೆ ಸೆರೆಮನೆಯಲ್ಲಿ ರಾಜಕೀಯ ಕೈದಿಗಳು ಅನುಭವಿಸುವ ಕಲ್ಪನೆಯಿರಲಾರದು. ಅನೇಕ ದಿವಸಗಳ ಹೋರಾಟದ ನಂತರ

ಈಗ ಸೆರೆಮನೆಗಳಲ್ಲಿ ಕೊಂಚಮಟ್ಟಿಗಾದರೂ ಸುಧಾರಣೆಯಾಗಿದೆ. ಆದರೆ ಆಗಿನ ರಾಜಬಂದಿಗಳ ಅವಸ್ಥೆಯು ಅನುಕಂಪನೀಯವಾಗಿತ್ತು. ಅವರ ಸಂಕಟಗಳ ಭೀಷಣತೆಯನ್ನು ತಿಳಿಸುವ ಅನೇಕಾನೇಕ ಉದಾಹರಣೆಗಳು ದೊರೆಯುತ್ತವೆ. ೧೯೧೬ ರಲ್ಲಿ ನಡೆದ ಕಾಶಿಯ ಒಳಸಂಚಿನ ಮೊಕದ್ದಮೆಯಲ್ಲಿಯ ಹನ್ನೊಂದು ರಾಜಬಂದಿಗಳ ಪೈಕಿ ಮೂವರು ಮೃತ್ಯುವಿಗೆ ತುತ್ತಾದರು. ಒಬ್ಬನಿಗೆ ಹುಚ್ಚು ಹಿಡಿಯಿತು. "ಅಂದಮಾನದಲ್ಲಿಯ ಹತ್ತು ವರುಷಗಳು" ಎಂಬ ಬಂಗಾಲಿ ಪುಸ್ತಕದಲ್ಲಿ ಸುಪ್ರಸಿದ್ಧ ಬಾರಿಸಾಲ ಒಳಸಂಚಿನ ಮೊಕದ್ದಮೆಯಲ್ಲಿ ಶಿಕ್ಷೆ ಹೊಂದಿದ ಲೇಖಕನು ಅಂದಮಾನದಲ್ಲಿಯ ರಾಜಕೀಯ ಕೈದಿಗಳ ಜೀವನದಲ್ಲಿ ಆಗಾಗ್ಗೆ ಒದಗುವ ಆನೇಕ ಭೀಷಣ ಘಟನೆಗಳನ್ನು ವರ್ಣಿಸಿದ್ದಾನೆ. ವೀರ ಸಾವರಕರರ "ನನ್ನ ಕರಿನೀರಿನ ಶಿಕ್ಷೆ" ಎಂಬ ಪುಸ್ತಕದಲ್ಲಿ ಅಂದಮಾನದಲ್ಲಿ ಅನೇಕ ರಾಜಬಂದಿಗಳು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದನ್ನೂ, ಅನೇಕರಿಗೆ ಹುಚ್ಚು ಹಿಡಿಯುವುದನ್ನೂ ಹೃದಯ ಬಿರಿಯುವಂತೆ ಬಣ್ಣಿಸಲಾಗಿದೆ. ಸ್ವತಃ ಸಾವರಕರರಿಗೆ ಎತ್ತಿನಂತೆ ಗಾಣವನ್ನು ಎಳೆಯುವ ಪ್ರಸಂಗ ಬಂದಿದೆ! ರಾಜಬಂದಿಗಳಿಗೆ ಏಕಾಂತವಾಸದ ಅಸಹ್ಯ ಯಾತನೆಗಳನ್ನು ಅನುಭವಿಸಹಚ್ಚುವುದು, ಅವರಿಗೆ ಮಾನಸಿಕ ವೇದನೆಗಳಾಗುವಂತೆ ಮಾಡುವುದು, ದೇಶಭಕ್ತ ಕೈದಿಗಳೊಡನೆ ಉದ್ದಾಮತನದಿಂದ ಅವರಿಗೆ ಅವಮಾನವಾಗುವಂತೆ ವರ್ತಿಸುವುದು, ಅವರು ಬುದ್ಧಿಗೆ ಯಾವುದೇ ಖಾದ್ಯ ಸಿಗಬಾರದೆಂದು ಪತ್ರಿಕೆಗಳನ್ನಾಗಲಿ ಪುಸ್ತಕಗಳನ್ನಾಗಲಿ ಕೊಡದಿರುವುದು, ಆಪ್ತೇಷ್ಟರ ಹಾಗೂ ಸ್ನೇಹಿತರ ಭೇಟಿಗೆ ಅನುಮತಿಯನ್ನು ನಿರಾಕರಿಸುವುದು, ಸಾರ್ವಜನಿಕವಾಗಿ ಬೇಡಿ ಹಾಕುವುದು, ಅತ್ಯಂತ ನಿಕೃಷ್ಟವಾದ ಆಹಾರವನ್ನು ಕೊಡುವುದು, ಸರಿಯಾದ ವೈದ್ಯಕಿಯ ಸಹಾಯವನ್ನು ಕೊಡದಿರುವುದು, ಅವರ ಪರಸ್ಪರ ಭೆಟ್ಟಿಯಾಗದಂತೆ ಮಾಡುವುದು ಹೀಗೆ ನಾನಾ ಪ್ರಕಾರದ ಕಷ್ಟಗಳನ್ನು ಕೊಡುವ ಪರಿಪಾಠವಿತ್ತು. ಬ್ರಿಟಿಷ್ ಜೈಲುಗಳೆಂದರೆ ಯಮಪುರಿ! ಈ ಯಮಪುರಿಯಲ್ಲಿಯ ನರಕಯಾತನೆಗಳಿಂದ ದೇಶದಲ್ಲಿಯ ಸ್ವಾತಂತ್ರ್ಯ ಜ್ಯೋತಿಯನ್ನು ನಂದಿಸಿಬಿಡಬೇಕೆಂಬುದು ಅವರ ಹವ್ಯಾಸ. ಆದರೆ ಕಿರಿದಾದ ಅಂಕುಶವು ಮದೋನ್ಮತ್ತ ಆನೆಯ ಮದವನ್ನು ಇಳಿಸಬಲ್ಲದೆಂಬುದೂ, ಕಿರಿದಾದ ಜ್ಯೋತಿಯು

ಘನಾಂಧಃಕಾರವನ್ನು ನಾಶಗೊಳಿಸಬಲ್ಲದೆಂಬುದೂ ಅನುಭವಸಿದ್ಧವಾಗಿದೆ. ಅವರ ಪ್ರಬಲ ಪ್ರಯತ್ನಗಳಿಂದಲೂ ನಂದದೆ ಕುಂದದೆ ಸ್ವಾತಂತ್ರ್ಯ ಜ್ಯೋತಿಯು ಪ್ರಜ್ವಲಿಸಿತು. ಗಗನಮಂಡಲವನ್ನು ವ್ಯಾಪಿಸಿತು. ಇಂದು ಭಾರತವು ಸ್ವತಂತ್ರವಾಗಿದೆ. ಆದರೆ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರ ಸ್ಮರಣೆಯಾದಾಗಲೆಲ್ಲ ಬ್ರಿಟಿಷ್ ಸೆರೆಮನೆಗಳ ಜ್ಞಾಪಕವೂ ಆಗುತ್ತದೆ. ಸೆರೆಮನೆಗಳು ಬ್ರಿಟಿಷ್ ದಬ್ಬಾಳಿಕೆಯ ಹಾಗೂ ಅತ್ಯಾಚಾರಗಳ ಮೂರ್ತಿಮಂತ ಪ್ರತೀಕವಾಗಿ ಉಳಿದಿವೆ.

ಇಂತಹ ಈ ನರಕ ಸದೃಶ ಸೆರೆಮನೆಗಳಲ್ಲಿಯೇ ತಮ್ಮ ಜೀವನದ ಬಹುಭಾಗವನ್ನು ಕಳೆಯಬೇಕಾಗಿದ್ದ ರಾಜಬಂದಿಗಳ ಅವಸ್ಥೆಯಲ್ಲಿ ಸುಧಾರಣೆಯಾಗುವುದು ಅತ್ಯಾವಶ್ಯಕವಿದ್ದುದರಿಂದಲೇ ಭಗತ್‌ಸಿಂಗನು ಅನ್ನಸತ್ಯಾಗ್ರಹವನ್ನು ಕೈಕೊಂಡನು. ಇದಕ್ಕೂ ಮುಂಚೆಯಾದರೂ ಅನೇಕ ಅನ್ನಸತ್ಯಾಗ್ರಹಗಳಾಗಿದ್ದವು. ಆದರೆ ಭಗತ್‌ಸಿಂಗನ ಅನ್ನಸತ್ಯಾಗ್ರಹವು ಅಪೂರ್ವವಾಗಿತ್ತು. ಕಾಕೋರಿ ಒಳಸಂಚಿನ ಕೈದಿಗಳ ಅನ್ನಸತ್ಯಾಗ್ರಹವೊಂದನ್ನು ಬಿಟ್ಟರೆ ಉಳಿದೆಲ್ಲವುಗಳು ವ್ಯಕ್ತಿಗತ ತೊಂದರೆಗಳನ್ನು ದೂರ ಮಾಡುವುದಕ್ಕೋಸ್ಕರ ಕೈಕೊಂಡವುಗಳಾಗಿದ್ದವು. ಭಗತ್‌ಸಿಂಗನ ವಿಷಯವಾದರೋ ಬೇರೆಯಾಗಿತ್ತು. ವ್ಯಕ್ತಿಗತವಾಗಿ ಅವನಿಗೆ ಯಾವ ಲಾಭವೂ ಆಗುವಂತಿರಲಿಲ್ಲ. ಅವನು ದೆಹಲಿ ಸೆರೆಮನೆಯಲ್ಲಿದ್ದಾಗ ಅವನಿಗೂ ಬಟುಕೇಶ್ವರ ದತ್ತನಿಗೂ ಐರೋಪ್ಯರ ದರ್ಜೆಯಿಂದ ನಡೆಸಿಕೊಳ್ಳಲಾಗುತ್ತಿತ್ತು. ಮುಂದೆ ಭಗತ್‌ಸಿಂಗನು ಲಾಹೋರ ಕೇಂದ್ರ ಕಾರಾಗ್ರಹದಲ್ಲಿ ಬಂದನು; ಮತ್ತು ಬಟುಕೇಶ್ವರ ದತ್ತನು ಮಿಾನವಾಲಿಯ ಕೇಂದ್ರ ಕಾರಾಗ್ರಹಕ್ಕೆ ಒಯ್ಯಲ್ಪಟ್ಟನು. ಅವರಿಬ್ಬರೂ ಬೇರ್ಪಡಿಸಲ್ಪಟ್ಟಿದ್ದರೂ ಅವರನ್ನು ಮುಂಚಿನಂತೆ ಒಳ್ಳೆಯ ರೀತಿಯಿಂದಲೇ ನಡೆಸಿಕೊಳ್ಳಲಾಗುತ್ತಿತ್ತು. ಬೇರಾವ ಸೆರೆಮನೆಗೆ ಒಯ್ದರೂ ತಮ್ಮನ್ನು ವಿಶೇಷ ರೀತಿಯಿಂದ ನಡೆಸಿಕೊಳ್ಳುವರೆಂಬುದು ಭಗತ್‌ಸಿಂಗನಿಗೆ ನಿಶ್ಚಿತವಾಗಿ ಗೊತ್ತಿತ್ತು. ಆದರೂ ಅವರ ಅನ್ನಸತ್ಯಾಗ್ರಹವು ಮುಂದುವರಿಯಿತು. ಎರಡನೆಯದಾಗಿ ಭಗತ್‌ಸಿಂಗನಿಗೆ ಸೆರೆಮನೆಯಲ್ಲಿ ಬಹು ದಿವಸ ಕಾಲ ಕಳೆಯುವ ಪ್ರಸಂಗವಿರಲಿಲ್ಲ. ಸ್ಯಾಂಡರ್ಸನ ಕೊಲೆಯ ಆರೋಪವು ತನ್ನ ಮೇಲೆಯೇ ಬರುವುದು ಮತ್ತು ಲಾಹೋರ ಒಳಸಂಚಿನ ಮೊಕದ್ದಮೆ

ಯಲ್ಲಿ ತನ್ನನ್ನು ಸೇರಿಸುವರೆಂಬುದು ಈಗ ಅವನಿಗೆ ಮನವರಿಕೆಯಾಗಿತ್ತು. ಆದ್ದರಿಂದ ಗಲ್ಲಿನ ಶಿಕ್ಷೆಯಾಗಿ ತಾನು ಬೇಗನೆ ಇಹಲೋಕಯಾತ್ರೆಯನ್ನು ಮುಗಿಸುವೆನೆಂದು ಅವನಿಗೆ ಖಾತ್ರಿಯಾಗಿತ್ತು. ರಾಜಕೀಯ ಕ್ಷೇತ್ರದಲ್ಲಿಯ ಕಾರ್ಯಕರ್ತರಿಗೆ ಸೆರೆಮನೆಯಲ್ಲಿ ಸ್ವಲ್ಪಮಟ್ಟಿಗಾದರೂ ಅನುಕೂಲತೆಗಳಿರ ಬೇಕೆಂದು ಭಗತ್‌ಸಿಂಗನಿಗೆ ಬಹಳ ಅನಿಸುತ್ತಿತ್ತು. ಆದ್ದರಿಂದ ಅವನು ಎಲ್ಲ ರಾಜಕೀಯ ಕೈದಿಗಳ ವ್ಯವಸ್ಥೆಯಲ್ಲಿ ಸುಧಾರಣೆಯಾಗಬೇಕೆಂದು ಅನ್ನ ಸತ್ಯಾಗ್ರಹವನ್ನಾರಂಭಿಸಿದನು. ಈವರೆಗೆ ಭಗತ್‌ಸಿಂಗನಿಗೆ ದೊರೆತ ಗೌರವ ಮತ್ತು ಈ ಅನ್ನಸತ್ಯಾಗ್ರಹದ ಬಗ್ಗೆ ಪತ್ರಿಕೆಗಳು ಮಾಡಿದ ಅನುಕೂಲಪ್ರಚಾರ ಇವುಗಳಿಂದಾಗಿ ರಾಜಕೀಯಕೈದಿಗಳ ಸ್ಥಿತಿಗತಿಗಳು ಉತ್ತಮಗೊಳ್ಳುವ ಅವಶ್ಯ ಕತೆಯ ಕಡೆಗೆ ಪ್ರಥಮ ಬಾರಿಯೇ ಜನತೆಯ ಗಮನವು ಸೆಳೆಯಲ್ಪಟ್ಟಿತು.

ರಾಜಕೀಯ ಕೈದಿಗಳಿಗೆ ಒಳ್ಳೆಯ ನಡತೆ ದೊರೆಯಬೇಕೆಂಬ ತನ್ನ ಬೇಡಿಕೆಯಲ್ಲಿ ಭಗತ್‌ಸಿಂಗನು ಬೇಕಂತೆಯೇ ತನ್ನ ಮಟ್ಟವನ್ನು ಕೆಳಗೇ ಇಟ್ಟಿದ್ದನು. ವಿಶೇಷ ತೊಂದರೆಯಿಲ್ಲದೆ ಸರಕಾರದವರು ತಮ್ಮ ಬೇಡಿಕೆಗಳನ್ನು ಒಪ್ಪಿಕೊಳ್ಳುವುದು ಸಾಧ್ಯವಾಗಬೇಕು. ಮತ್ತು ರಾಜಕೀಯ ಕೈದಿಗಳ ನಿತ್ಯದ ಜೀವನವು ಸುಸಹ್ಯವಾಗಬೇಕು ಎಂಬುದೇ ಅವನ ಮನಸ್ಸಾಗಿತ್ತು. ಈ ವಿಷ ಯದಲ್ಲಿ ಅವನ ದೃಷ್ಟಿಕೋನವು ವ್ಯಾವಹಾರಿಕವಾಗಿತ್ತು. ವ್ಯಕ್ತಿಗತ ಲಾಭ ಮತ್ತು ಸ್ವಾರ್ಥಗಳ ಆಶೆಯನ್ನು ಬದಿಗಿರಿಸಿ ರಾಜಕೀಯ ಉದ್ದೇಶಗಳಿಂದ ಪ್ರೇರಿತರಾಗಿ ಮಾಡಿದ ಅಪರಾಧಕ್ಕಾಗಿ ಶಿಕ್ಷೆಗೆ ಗುರಿಯಾದವರೆಲ್ಲರೂ ರಾಜ ಕೀಯ ಕೈದಿಗಳೆಂದು ತಿಳಿಯಬೇಕು. ಅವರಿಗೆ ಅಭ್ಯಾಸಕ್ಕಾಗಿ ಪುಸ್ತಕಗಳನ್ನು ಓದಲು ಪತ್ರಿಕೆಗಳನ್ನು, ತಿನ್ನಲು ಆರೋಗ್ಯಕರವಾದ ಆಹಾರವನ್ನು ಮತ್ತು ಬೇರೆ ರಾಜಬಂದಿಗಳೊಡನೆ ಸೇರಿ ವ್ಯವಹರಿಸಲು ಅನುಮತಿ ಇವೇ ಮೊದ ಲಾದ ಅನುಕೂಲತೆಗಳನ್ನು ಒದಗಿಸಿ ಕೊಡಬೇಕೆಂದು ಭಗತ್‌ಸಿಂಗನ ಬೇಡಿಕೆ ಯಾಗಿತ್ತು. ಮುಂದೆ ಮಾತ್ರ ಆ ಅಮರ ಜತೀಂದ್ರನಾಥ ದಾಸರು ಸಮರ ಭೂಮಿಯಲ್ಲಿ ಬಂದಬಳಿಕ ಈ ಹೋರಾಟಕ್ಕೆ ಧ್ಯೇಯವಾದೀ ಸ್ವರೂಪವು ಪ್ರಾಪ್ತವಾಯಿತು. ಮತ್ತು ದುಃಖಯಾತನೆಗಳಿಂದ ತುಂಬಿದ ಈ ಹೋರಾ ಟವು ಹೆಚ್ಚೆಚ್ಚು ದಿವಸ ನಡೆದಂತೆ ಅದಕ್ಕೆ ಹೆಚ್ಚೆಚ್ಚು ಧ್ಯೇಯವಾದಿ ಸ್ವರೂ ಪವು ಬರಹತ್ತಿತು.

ತಾವು ವ್ಯವಹರಿಹರಿಸಬೇಕಾದ ಕೈದಿಗಳು ಎಷ್ಟೊಂದು ಸತ್ವಶಾಲಿಗಳಾಗಿದ್ದಾರೆಂಬುದರ ಕಲ್ಪನೆ ಅಧಿಕಾರಿಗಳಿಗಿರಲಿಲ್ಲ. ಹಸಿವೆಯ ಭಯಾನಕ ವೇದನೆಗಳು ಅವರನ್ನು ಅನ್ನಸತ್ಯಾಗ್ರಹದಿಂದ ಪರಾವೃತ್ತಗೊಳಿಸಲು ಸಮರ್ಥವಾಗುವವು ಎಂಬುದು ಅವರ ಆಲೋಚನೆ. ಆದರೆ ಅನ್ನಸತ್ಯಾಗ್ರಹವು ಯಾವ ತಡೆಯೂ ಇಲ್ಲದೆ ಮುಂದುವರಿದದ್ದರಿಂದ ಸರಕಾರವು ವಿವಂಚನೆಗೊಳಗಾಯಿತು. ಇದೇ ಸಮಯಕ್ಕೆ ಬಾರ್ಸ್ಟಲ್ ಜೈಲಿನಲ್ಲಿದ್ದ ಲಾಹೋರ ಒಳಸಂಚಿನ ಕಚ್ಚಾ ಕೈದಿಗಳು ಸಹ ದಿ. ೧೩—೭—೧೯೨೯ ರಿಂದ ಅನ್ನಸತ್ಯಾಗ್ರಹವನ್ನು ಸಾರಿದ್ದರಿಂದ ಭಗತ್‌ಸಿಂಗನ ಪಕ್ಷಕ್ಕೆ ಮತ್ತಿಷ್ಟು ಬಲ ಬಂದಿತು. ಭಗತ್‌ಸಿಂಗ–ದತ್ತರ ಅನಶನವು ಆರಂಭವಾಗಿ ಈಗಾಗಲೇ ಒಂದು ತಿಂಗಳಾಗುತ್ತ ಬಂದಿತ್ತು. ಸತ್ವಶಾಲಿ ಅನ್ನಸತ್ಯಾಗ್ರಹ ಮತ್ತು ಸಾರ್ವಜನಿಕರ ಅಭಿಪ್ರಾಯ ಇವುಗಳ ಮುಂದೆ ಪಂಜಾಬ ಸರಕಾರವು ಮಣಿಯಲಾರಂಭಿಸಿತು. ದಿ. ೧೪—೭—೨೯ ರಂದು ( ಅದೇ ದಿವಸ ಭಗತ್‌ಸಿಂಗನು ಭಾರತ ಸರಕಾರದ ಗೃಹಮಂತ್ರಿಗಳಿಗೆ ವಿಶೇಷ ಮನವಿಯೊಂದನ್ನು ಕಳಿಸಿದ್ದನು. ) ಪಂಜಾಬ ಸರಕಾರವು ಒಂದು ಪ್ರಕಟನೆಯನ್ನು ಹೊರಡಿಸಿ " ಆರೋಗ್ಯಕ್ಕೋಸ್ಕರ " ಎಂಬ ಕಾರಣದಿಂದ ಲಾಹೋರ ಒಳಸಂಚಿನ ಕಚ್ಚಾ ಕೈದಿಗಳಿಗೆ ಆಹಾರದ ವಿಷಯದಲ್ಲಿ ಕೆಲವು ಸೌಕರ್ಯಗಳನ್ನು ಕೊಟ್ಟಿತು. ಮುಂದೆ " ಆರೋಗ್ಯಕ್ಕೋಸ್ಕರ " ಎಂಬುದನ್ನು ತೆಗೆದುಹಾಕಿ ಅದೇ ಸೌಕರ್ಯಗಳನ್ನು ಎಲ್ಲ ರಾಜಬಂದಿಗಳಿಗೂ ಕೊಡಲಾಯಿತು. ಮುಂದೆ ಕೆಲವು ದಿವಸಗಳಲ್ಲಿಯೇ ರಾಜಬಂದಿಗಳ ದೂರುಗಳನ್ನು ಕೇಳಿಕೊಂಡು ಅವುಗಳ ವಿಷಯದಲ್ಲಿ ಸರಕಾರಕ್ಕೆ ಸಲಹೆಯನ್ನೀಯುವುದಕ್ಕಾಗಿ " ಜೇಲ್ ಇನ್‌ಕ್ವಾಯರಿ ಕಮಿಟಿ "—ಜೇಲ್ ವಿಚಾರಣಾ ಸಮಿತಿಯೊಂದನ್ನು ನಿಯಮಿಸಲಾಯಿತು. ಈ ರೀತಿ ಸರಕಾರವು ತನ್ನ ಕಡೆಯಿಂದ ಈ ಸಮಸ್ಯೆಯನ್ನು ಬಗೆಹರಿಯಲೆತ್ನಿಸಿತು.

ಆದರೆ ಅನ್ನಸತ್ಯಾಗ್ರಹವು ಹಾಗೆಯೇ ಮುಂದುವರಿಯಿತು. ದಿನ ಕಳೆದಂತೆ ಜತೀಂದ್ರನಾಥ ದಾಸನ ಪ್ರಕೃತಿಯು ಚಿಂತಾಜನಕವಾಗಹತ್ತಿತು. ಅವನಾದರೋ ಯಾರ ಮಾತನ್ನೂ ಕೇಳದೆ ಯಾವ ಆಶ್ವಾಸನೆಗಳಿಂದಲೂ ಸಂತುಷ್ಟನಾಗದೆ ರಾಜಬಂದಿಗಳ ವ್ಯವಸ್ಥೆಯಲ್ಲಿ ಸಂಪೂರ್ಣ ವ್ಯತ್ಯಾಸವಾಗಬೇಕೆಂಬ ಧ್ಯೇಯವಾದಿ ಹೋರಾಟವನ್ನೇ ಆರಂಭಿಸಿದನು. ಭಗತ್‌ಸಿಂಗನಿಗೆ

ಜತೀಂದ್ರನ ಪ್ರಕೃತಿಯು ಚಿಂತಾಜನಕವಾದದ್ದು ತಿಳಿದೊಡನೆಯೇ ದಿನಾಂಕ ೨೮—೭—೨೯ರಂದು ಪ್ರಮುಖ ಕಾಂಗ್ರೆಸ್ಸಿಗನೊಬ್ಬನೊಡನೆ ವಿಶೇಷ ಸಂದೇಶವೊಂದನ್ನು ಕಳಿಸಿ ಬಾರ್ಸ್ಟಲ್ ಸೆರೆಮನೆಯಲ್ಲಿಯ ಕಚ್ಚಾ ಕೈದಿಗಳು ಅನ್ನಸತ್ಯಾಗ್ರಹವನ್ನು ನಿಲ್ಲಿಸಿ ನಡೆದ ಹೋರಾಟದ ಹೊಣೆಯನ್ನು ತಾನು ಮತ್ತು ಒಟುಕೇಶ್ವರ ದತ್ತ ಇವರಿಬ್ಬರಿಗೇನೇ ವಹಿಸಿ ಕೊಡಬೇಕೆಂದು ತಿಳಿಸಿದನು. ಆದರೆ ಇದರಿಂದ ಪ್ರಯೋಜನವಾಗಲಿಲ್ಲ. ಜತೀಂದ್ರನ ಹೋರಾಟವು ಹಾಗೆಯೇ ಮುಂದುವರಿಯಿತು. ಸಹಾನುಭೂತಿಪರ ಸತ್ಯಾಗ್ರಹಗಳು ಆರಂಭವಾದವು. ಭಾರತದ ಬೇರೆ ಬೇರೆ ಜೈಲುಗಳಲ್ಲಿದ್ದ ರಾಜಕೀಯ ಕೈದಿಗಳೆಲ್ಲಾ ಅನಶನವನ್ನಾರಂಭಿಸಿದರು. ಮೀರತ ಒಳಸಂಚಿನ ಕೈದಿಗಳು ಮತ್ತು ೧೯೧೫—೧೬ ರ ಪ್ರಥಮ ಲಾಹೋರ ಒಳಸಂಚಿನ ಕೈದಿಗಳು ಇದರಲ್ಲಿ ಪ್ರಮುಖರಾಗಿದ್ದರು. ಈ ಅನ್ನಸತ್ಯಾಗ್ರಹದ ಸುದ್ದಿಯು ಸಮುದ್ರವನ್ನು ದಾಟಿಹೋಯಿತು. ಮತ್ತು ಅದರಿಂದ ಇಂಗ್ಲೆಂಡಿನ ವಾತಾವರಣವು ಕದಡಿತು. ಇಡಿ ಜಗತ್ತಿನ ಲಕ್ಷವು ಭಾರತದ ಸೆರೆಮನೆಗಳಲ್ಲಿಯ ವ್ಯವಸ್ಥೆಯತ್ತ ಸೆಳೆಯಲ್ಪಟ್ಟಿತು.

ಜತೀಂದ್ರನ ಪ್ರಕೃತಿಯು ಇನ್ನಷ್ಟು ಚಿಂತಾಜನಕವಾಯಿತು. ಅವನ ದೇಹವೆಲ್ಲ ವಿಷಮಯವಾಗಿತ್ತು. ಕಣ್ಣುಗಳನ್ನು ತೆರೆಯಲು ಸಹ ಅವನು ಅಸಮರ್ಥನಾಗಿದ್ದನು. ಇನೆಮಾ ಕೊಟ್ಟರೆ ಪ್ರಕೃತಿಯಲ್ಲಿ ಸ್ವಲ್ಪ ಸುಧಾರಣೆಯಾಗಬಹುದೆಂದು ಅವನಿಗೆ ಹೇಳಲಾಯಿತು. ಆದರೆ ಅವನು ಇನೆಮಾ ತೆಗೆದುಕೊಳ್ಳಲಿಕ್ಕೆ ಸಹ ಸಮ್ಮತಿ ಕೊಡಲಿಲ್ಲ. ಲಾಹೋರ ಒಳಸಂಚಿನ ಮೊಕದ್ದಮೆಯ ಸಂರಕ್ಷಕ ಸಮಿತಿಯ ಸದಸ್ಯರೇ ಮೊದಲಾದ ಅನ್ನಸತ್ಯಾಗ್ರಹಿಗಳ ಹಿತಚಿಂತಕರು ಎಷ್ಟೇ ವಿಷಾದಪಟ್ಟರೂ, ಎಷ್ಟೇ ಕಳಕಳಿಯಿಂದ ಬಿನ್ನವಿಸಿದರೂ ಜತೀಂದ್ರನು ತನ್ನ ನಿರ್ಧಾರಕ್ಕೇನೇ ಅಂಟಿಕೊಂಡನು. ಇಂತಹ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂಬುದೇ ಅಧಿಕಾರಿಗಳಿಗೆ ತಿಳಿಯದಾಯಿತು. ಜತೀಂದ್ರನು ಯಾರ ಮಾತಿಗಾದರೂ ಗೌರವ ಕೊಡುತ್ತಿದ್ದರೆ ಅದು ಭಗತ್ ಸಿಂಗನ ಮಾತಿಗೇನೇ. ಆದುದರಿಂದ ಅವನು ಇನೆಮಾ ತಕ್ಕೊಳ್ಳುವಂತೆ ಹೇಳಲು ಭಗತ್‌ಸಿಂಗನನ್ನು ಬಿನ್ನವಿಸಬಹುದೆಂದು ಪಂಜಾಬಿನ ಗವ್ಹರ್ನರನಿಗೆ ತಿಳಿಸಲಾಯಿತು. ಈ ನಿರ್ದಿಷ್ಟ ಕೆಲಸಕ್ಕಾಗಿ ಭಗತ್‌ಸಿಂಗನನ್ನು ಕೇಂದ್ರ ಕಾರಾಗ್ರಹದಿಂದ ಬಾರ್ಸ್ಟಲ್ ಸೆರೆಮನೆಗೆ ತರಲು ಗವ್ಹರ್ನರನು ಕೂಡಲೆ

ಅಪ್ಪಣೆ ಕೊಟ್ಟನು. ಭಗತ್‌ಸಿಂಗನ ಬಲವಾದ ಪ್ರತಿಪಾದನೆಯ ಪರಿಣಾಮ ವಾಗಿ ಅವನ ಬಿನ್ನಹಕ್ಕೆ ಜತೀಂದ್ರನು ಒಪ್ಪಿಗೆಯನ್ನಿತ್ತನು. ಮತ್ತು ಇನೆಮಾ ಮಾಡಗೊಟ್ಟನು. ಈ ಇನೆಮಾದಿಂದ ಜತೀಂದ್ರನ ಜೀವಮಾನವು ೧೫ ದಿವಸ ಹೆಚ್ಚಿಗೆ ಬೆಳೆಯಿತೆಂದು ಡಾಕ್ಟರು ವರದಿ ಮಾಡಿದ್ದಾರೆ. ಇದೇ ಕಾರ್ಯವನ್ನು ಸಾಧಿಸಲು ಬಗೆಬಗೆಯ ಉಪಾಯುಗಳನ್ನು ಮಾಡಿ ಬೇಸತ್ತ ಸೆರೆಮನೆಯ ಅಧಿಕಾರಿಗಳು ಆಶ್ಚರ್ಯಚಕಿತರಾದರು. ಬಾರ್ಸ್ಟಲ್ ಜೈಲಿನ ಡೆಪ್ಯುಟಿ ಸುಪರಿಂಟೆಂಡೆಂಟನಾದ ಖಾನಸಾಹೇಬ ಖೈರುದ್ದೀನನು, ' ಯಾವ ಮಾತನ್ನು ಜೈಲಿನೊಳಗಿನ ಜನರೆಲ್ಲರೂ ಹೇಳಿದಾಗ ನೀವು ಮೀರಿದ್ದಿರೋ ಅದೇ ಮಾತನ್ನು ಭಗತ್‌ಸಿಂಗನು ಹೇಳಿದಾಗ ಕೂಡಲೇ ಹೇಗೆ ಒಪ್ಪಿದಿರಿ ? " ಎಂದು ಕೇಳಿದ್ದಕ್ಕೆ ಜತೀಂದ್ರನು ಗಂಭೀರವಾಗಿ ಉತ್ತರಿಸಿದನು: " ಖಾನಸಾಹೇಬರೆ, ಈ ವಿಷಯ ನಿಮಗೆ ಏನೂ ಗೊತ್ತಿಲ್ಲ. ಭಗತ್‌ಸಿಂಗನು ವೀರನಿದ್ದಾನೆ, ಶೂರ ನಿದ್ದಾನೆ. ನಾನು ಅವನ ಮಾತಿಗೆ ಅಗೌರವ ಮಾಡಲಾರೆನು. " ಇಂತಹದೆ ಸಂದರ್ಭ ಇನ್ನೊಂದು ಬಾರಿ ಬಂದಿತ್ತು. ಪಂಜಾಬ್ ಜೈಲ್ ವಿಚಾರಣಾ ಸಮಿತಿಯ ಫಲವು ದೃಷ್ಟಿಪಥವಲ್ಲಿ ಬಂದಾಗ ಆ ಫಲವನ್ನು ಪರೀಕ್ಷಿಸುವ ಸಂಧಿ ಯನ್ನು ಸಾಧಿಸುವುದಕ್ಕಾಗಿ ಜತೀಂದ್ರನಿಗೆ ಔಷಧವನ್ನು ಸ್ವೀಕರಿಸಹಚ್ಚಿದವ ನಾದರೂ ಭಗತ್‌ಸಿಂಗನೇ. ಅವನು ಅತ್ಯಂತ ಕ್ಷೀಣ ಧ್ವನಿಯಲ್ಲಿ ತಡವರಿ ಸುತ್ತ ಸರದಾರನಿಗೆ ನುಡಿದದ್ದೇನಂದರೆ, " ಭಗತ್‌ಸಿಂಗ್! ನಾನು ನನ್ನ ವ್ರತ ದಿಂದ ಎಳ್ಳಷ್ಟೂ ಕದಲಬಾರದೆಂದು ನನಗೆ ಅನಿಸುತ್ತಿದ್ದರೂ ಮತ್ತು ಈವಿಷಯ ನನಗೆ ಪೂರ್ತಿ ಮನವರಿಕೆಯಾಗಿದ್ದರೂ ಸಹ ನಾನು ನಿಮ್ಮ ವಿನಂತಿಯನ್ನು ನಿರಾಕರಿಸಲಾರೆನು. ಇನ್ನೊಮ್ಮೆ ನನಗೆ ಏನನ್ನೂ ಹೇಳದಿರುವ ಕೃಪೆ ಯಾಗಲಿ ! "

ಜೈಲ್ ವಿಚಾರಣಾ ಸಮಿತಿಯ ಆಶ್ವಾಸನಗಳ ಆಧಾರದ ಮೇಲೆ ಅನ್ನ ಸತ್ಯಾಗ್ರಹವನ್ನು ನಿಲ್ಲಿಸುವ ಸಮಯ ಬಂದಾಗ ಭಗತ್‌ಸಿಂಗನ ಕಣ್ಣಿಗೆ ಅತ್ಯ ವಸ್ಥನಾದ ಜತೀಂದ್ರನ ಮೂರ್ತಿಯು ಕಟ್ಟಿತು. ಜತೀಂದ್ರನೇನೂ ಈ ಆಶ್ವಾ ಸನಗಳಿಂದ ಸಂತುಷ್ಟನಾಗಿರಲಿಲ್ಲ. ಅವನ ದೃಷ್ಟಿಕೋನವಾದರೂ ವ್ಯಾವ ಹಾರಿಕವಾಗಿರದೆ ಧ್ಯೇಯವಾದಿಯಾಗಿತ್ತು. ಆದರಿಂದ ಅನ್ನತ್ಯಾಗದ ವ್ರತಕ್ಕೆ ಅಂಟಿಕೊಳ್ಳುವುದೇ ಅವನ ನಿರ್ಧಾರವಾಗಿತ್ತು. ಅವನ ಪ್ರಾಣ ಉಳಿಸಬೇ

ಕೆಂಬುದು ಭಗತ್‌ಸಿಂಗನ ತಳಮಳವಾಗಿತ್ತು. ಆದುದರಿಂದ ಅನಶನವನ್ನು ಬಿಡುವಾಗ ಜತೀಂದ್ರನನ್ನು ಅನಿರ್ಬಂಧವಾಗಿ ಬಿಡುಗಡೆ ಮಾಡಬೇಕೆಂಬುದೇ ಮೊದಲನೆಯ ಕರಾರೆಂದು ಭಗತ್‌ಸಿಂಗನು ಒತ್ತಾಯಪಡಿಸಿದನು. ಜೈಲ ವಿಚಾರಣಾ ಸಮಿತಿಯ ಎಲ್ಲ ಸದಸ್ಯರೂ ಈ ಮಾತಿಗೆ ಒಮ್ಮತದಿಂದ ಒಪ್ಪಿಗೆಯನ್ನಿತ್ತರು. ಅವರ ಆಶ್ವಾಸನಗಳಿಂದ ೬೩ ದಿವಸ ನಡೆದ ಅನ್ನಸತ್ಯಾಗ್ರಹವು ನಿಲ್ಲಿಸಲ್ಪಟ್ಟಿತು. ( ಭಗತ್‌ಸಿಂಗ-ದತ್ತರ ಅನ್ನಸತ್ಯಾಗ್ರಹಕ್ಕೆ ೮೦ ದಿವಸಕ್ಕೂ ಮಿಕ್ಕಿ ಹೆಚ್ಚಿಗೆ ದಿವಸಗಳಾಗಿದ್ದವು. )

ಆದರೆ ಇಲ್ಲಿಗೆ ಈ ಪ್ರಕರಣವು ಕೊನೆಗಾಣಲಿಲ್ಲ ಸರಕಾರವು ತನ್ನ ದುರಾಗ್ರಹವನ್ನು ಬಿಡಲಿಲ್ಲ. ಜತೀಂದ್ರನ ಬಿಡುಗಡೆಯಾಗಲಿಲ್ಲ. ತತ್ಪರಿಣಾಮವಾಗಿ ಭಗತ್‌ಸಿಂಗ-ದತ್ತರು ಮತ್ತು ಬೇರೆ ನಾಲ್ವರು ರಾಜಬಂದಿಗಳು ಮತ್ತೆ ಅನ್ನಸತ್ಯಾಗ್ರಹವನ್ನಾರಂಭಿಸಿದರು. ಆದರೆ ರಾಜಬಂದಿಗಳ ದುರವಸ್ಥೆಯು ಸರಕಾರಕ್ಕೆ ಕಾಣುತ್ತಿದ್ದಿಲ್ಲ ಸರಕಾರದ ಕಣ್ಣುಗಳು ನೆತ್ತಿಗೇರಿದ್ದವು. ರಾಜಬಂದಿಗಳ ದೂರು ಅಧಿಕಾರಿಗಳಿಗೆ ಕೇಳಿಸುತ್ತಿದ್ದಿಲ್ಲ. ಅಧಿಕಾರಿಗಳು ಕಿವಿಯಿದ್ದು ಕಿವುಡರೂ, ಕಣ್ಣಿದ್ದು ಕುರುಡರೂ ಆಗಿದ್ದರು. ಹೀಗಾಗಿ ಭಗತ್‌ಸಿಂಗ ಮೊದಲಾದ ರಾಜಕೀಯ ಕೈದಿಗಳು ಅನುಭವಿಸಿದ ಕಷ್ಟಗಳ ಹಾಗೂ ಸಹಿಸಿದ ದುಃಖದ ಪರಿಣಾಮವೇನೂ ಆಗಲಿಲ್ಲ. ಜತೀಂದ್ರನು ಈ ಅನ್ನಸತ್ಯಾಗ್ರಹದಲ್ಲಿ ಮೃತಪಟ್ಟನು ಸ್ವಾತಂತ್ರ್ಯದ ಯಜ್ಞದಲ್ಲಿ ಆಹ್ವಾನಿತಳಾದ ನ್ಯಾಯದೇವತೆಗೆ ಜತೀಂದ್ರನ ಆತ್ಮವು ಅರ್ಪಿತವಾಯಿತು !

ಜೈಲ ವಿಚಾರಣಾ ಸಮಿತಿಯವರು ವಚನ ಕೊಟ್ಟಷ್ಟು ಮೊದಲನೆಯ ಹೋರಾಟಕ್ಕೆತಕ್ಕುದಾಗಿದೆಯೆಂದು ಎಲ್ಲ ರಾಜಕೀಯ ಕೈದಿಗಳು ಬಗೆದದ್ದರಿಂದ ಈ ದುರ್ದೈವೀ ಅನ್ನಸತ್ಯಾಗ್ರಹವು ಒಮ್ಮತದಿಂದ ನಿಲ್ಲಿಸಲ್ಪಟ್ಟಿತು.

## ಲಾಹೋರ ಒಳಸಂಚಿನ ಮೊಕದ್ದಮೆ

ಅನ್ನಸತ್ಯಾಗ್ರಹದ ಪ್ರಕರಣವು ಈ ರೀತಿ ಕೊನೆಗೊಂಡಬಳಿಕ ಈವರೆಗೆ ತಡೆ ಹಿಡಿಯಲ್ಪಟ್ಟ ಲಾಹೋರ ಒಳಸಂಚಿನ ಮೊಕದ್ದಮೆಯ ಪ್ರತ್ಯಕ್ಷ ವಿಚಾರಣೆಯು ಸಮೀಪಿಸಿತು. ಈ ವಿಚಾರಣೆಯನ್ನು ತಮ್ಮ ಉದ್ದೇಶ ಸಾಧನೆಗಾಗಿ

ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕೆಂದು ಭಗತ್‌ಸಿಂಗನು ಯೋಚಿಸಿದನು. ಅವನು, ಸುಖದೇವ ಮತ್ತು ವಿಜಯ ಕುಮಾರಸಿಂಹ ಮೂವರೂ ಸೇರಿ ಈ ವಿಷಯ ವಿಚಾರವಿಮರ್ಶೆ ಮಾಡಿದರು. ತಮ್ಮ ಕ್ರಾಂತಿ ಪಕ್ಷದ ಧ್ಯೇಯ ಧೋರಣೆ, ಕ್ರಾಂತಿತತ್ವದ ವಿವೇಚನೆ, ತಾವು ಮಾಡಿದ ಕೃತಿಯ ಸಮರ್ಥನೆ ಮೊದಲಾವುಗಳಿಂದ ಸಾಧ್ಯವಿದ್ದಷ್ಟು ಹೆಚ್ಚಿನ ಪ್ರಚಾರ ಕ್ಕಾಗಿ ಈ ಮೊಕದ್ದಮೆಯನ್ನು ಉಪಯೋಗಿಸಿಕೊಳ್ಳಬೇಕೆಂದು ಅವರು ಗೊತ್ತುಮಾಡಿದರು. ಈ ದೃಷ್ಟಿಯಿಂದ ಈ ಮೊಕದ್ದಮೆಯ ವಿಚಾರಣೆ ಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ ಹಾಗೆಲ್ಲಾ ಆ ಕ್ರಾಂತಿಕಾರಿಗಳ ಬುದ್ಧಿ ಚಾತು ರ್ಯದ ಪ್ರಭಾವವು ನಮ್ಮನ್ನು ಬೆರಗುಗೊಳಿಸುತ್ತದೆ. ಯಾವ ಮಾತು ಆಗ ಬಾರದೆಂದು ಸರಕಾರವು ತುಂಬಾ ಎಚ್ಚರದಿಂದ ಇರುತ್ತಿತ್ತೋ ಆ ಕ್ರಾಂತಿ ತತ್ವದ ಪ್ರಭಾವವು ಜನತೆಯ ಮೇಲೆ, ವಿಶೇಷವಾಗಿ ಯುವಕರಮೇಲೆ ಬೀಳು ವಂತೆ ಈ ಮೊಕದ್ದಮೆಯನ್ನೇ ಸಾಧನವಾಗಿ ಉಪಯೋಗಿಸಿದ ಅವರ ಜಾಣ್ಮೆಯು ಕೊಂಡಾಡುವಂತಿದೆ. ಈ ವಿಷಯದಲ್ಲಿ ಸರಕಾರಕ್ಕೆ ಈ ಮೊಕ ದ್ದಮೆಯು ತುಟ್ಟಿ ಬಿದ್ದಿತೆಂದೇ ಹೇಳಬೇಕಾಗುವುದು.

ಈ ಮೊಕದ್ದಮೆಯಿಂದ ಕ್ರಾಂತಿಪಕ್ಷಕ್ಕೆ ಆದಷ್ಟು ಲಾಭವನ್ನು ಮಾಡಿ ಕೊಡುವುದಕ್ಕಾಗಿ ಜೈಲಿನ ಒಳಗಡೆ ಒಂದು ಸಮಿತಿಯು ಏರ್ಪಟ್ಟಂತೆ ಹೊರ ಗಡೆ ಇವರ ಸಹಾಯಕ್ಕಾಗಿ ಹಾಗೂ ಸಂರಕ್ಷಣೆಗಾಗಿ 'ಸಂರಕ್ಷಣಾ ಸಮಿತಿ'ಯು ರಚಿತವಾಗಿತ್ತು. ಲಾಹೋರಿನಲ್ಲಿ ಒಳಸಂಚಿನ ಮೊಕದ್ದಮೆಯೊಂದನ್ನು ನಡೆಸಬೇಕೆಂದು ಪೋಲೀಸರ ಆಲೋಚನೆಯಿದೆ ಎಂದು ತಿಳಿದ ಕೂಡಲೆ ಎಲ್ಲ ಜಾತಿಯ ಮುಂದಾಳುಗಳು ಕಲೆತು ಅವರಿಗೆ ಕಾನೂನಿನ ಸಂರಕ್ಷಣೆ ಯನ್ನು ಕೊಡಬೇಕೆಂಬ ಉದ್ದೇಶದಿಂದ ಒಂದು 'ಸಂರಕ್ಷಣಾ ಸಮಿತಿ' ಯನ್ನು ರಚಿಸಿದರು. ಸಮಿತಿಯಲ್ಲಿ ಪ್ರಮುಖ ಮುಂದಾಳುಗಳಿದ್ದುದರಿಂದ ಮತ್ತು ಜನತೆಯ ಸಹಾನುಭೂತಿಯು ಈ ಕ್ರಾಂತಿಕಾರಿಗಳಿಗಿದ್ದುದರಿಂದ ಸಾಕಷ್ಟು ಹಣವನ್ನು ಸಂಗ್ರಹಿಸಲು ವಿಲಂಬವಾಗಲಿಲ್ಲ. ಈ ಹಣವು ಹೆಚ್ಚಾಗಿ ಬಡ ಜನತೆಯಿಂದಲೇ ಸಂಗ್ರಹವಾಗಿತ್ತು. ಅಂದಾಜು ೨೦–೩೦ ಸಾವಿರ ಜನರು ಧನಸಹಾಯವನ್ನು ಮಾಡಿರಬಹುದೆಂದು ತೋರುತ್ತದೆ. ಕಾನೂನಿನ ಸಂರಕ್ಷ ಣೆಯನ್ನು ಪಡೆದು ವೈಯಕ್ತಿಕವಾಗಿ ತಮ್ಮ ಸ್ವಂತ ಲಾಭ ಮಾಡಿಕೊಳ್ಳುವ

ಮನಸ್ಸು ಕ್ರಾಂತಿಕಾರಿಗಳಿಗಿರಲಿಲ್ಲ. ಅವರಾದರೋ ನ್ಯಾಯಾಲಯದ ವ್ಯಾಸ ಪೀಠದಲ್ಲಿ ನಿಂತು ದೇಶದ ಜನತೆಗೆ ಕ್ರಾಂತಿಯ ಸಂದೇಶವನ್ನು ಬೀರುವ ನಿರ್ಧಾರ ಮಾಡಿದ್ದರು. ಹೀಗಾಗಿ ಕಾನೂನಿನ ಸಂರಕ್ಷಣೆಯನ್ನು ಕೊಡುವ ದಕ್ಕೋಸ್ಕರ ಹೆಚ್ಚು ಹಣವನ್ನು ಖರ್ಚು ಮಾಡುವ ಆವಶ್ಯಕತೆಯುಂಟಾಗ ಲಿಲ್ಲ. ಅತ್ಯಂತ ಉತ್ಸಾಹಿ ಓದುಗರಾದ ಅವರಿಗೆ ಪುಸ್ತಕಗಳನ್ನು ದೊರಕಿಸಿ ಕೊಡುವುದು, ಅವರಿಗೆ ಆವಶ್ಯಕವೆನಿಸುವ ಬೇರೆ ವಸ್ತುಗಳನ್ನು ಪೂರೈಸುವುದು ದೂರದಿಂದ ಭೆಟ್ಟಿಗೆ ಬರುವ ಅವರ ಆಪ್ತೇಷ್ಟರ ಊಟದ ಹಾಗೂ ವಸತಿಯ ಏರ್ಪಾಟು ಮಾಡುವುದು ಮತ್ತು ಸಾಧ್ಯವಿದ್ದಷ್ಟು ಬಡ ರಾಜಬಂದಿಗಳ ಕುಟುಂಬದವರಿಗೆ ಆರ್ಥಿಕ ಸಹಾಯ ಮಾಡುವುದು ಇವೇ ಈ ' ಸಂರಕ್ಷಣಾ ಸಮಿತಿ ' ಯ ಕೆಲಸಗಳಾಗಿದ್ದವು.

ಪ್ರತ್ಯಕ್ಷ ವಿಚಾರಣೆಯ ಕೆಲಸವು ಆರಂಭವಾದ ಕೂಡಲೆ ಈ ರಾಜ ಬಂದಿಗಳು ಕಚ್ಚಾ ಕೈದಿಗಳ ಮೂಲಭೂತ ಅಧಿಕಾರಗಳಿಗಾಗಿ ಹೋರಾಡ ಬೇಕಾಯಿತು. ಅವರ ಪ್ರಯತ್ನಗಳ ಫಲವಾಗಿ ಅವರಿಗೆ ಒಳ್ಳೆಯ ಖುರ್ಚಿ ಗಳು, ವೃತ್ತಪತ್ರಿಕೆಗಳು, ಮೇಜು, ಉಪಹಾರ ಮೊದಲಾದ ಸೌಕರ್ಯಗಳು ಕ್ರಮವಾಗಿ ದೊರೆತವು. ಅವರನ್ನು ಸಾಮಾನ್ಯ ಅಪರಾಧಿಗಳಂತೆ ನಡೆಯಿಸಿ ಕೊಳ್ಳುವ ರೀತಿಯೂ ಮಾರ್ಪಟ್ಟಿತು. ಅವರನ್ನು ಸನ್ಮಾನಪೂರ್ವಕವಾಗಿ ವರ್ತಿಸಿಕೊಳ್ಳಲು ಆರಂಭವಾಯಿತು. ಅಂತೂ ಅವರೇನೂ ದೇಶಭಕ್ತರಿಗಿಂತ ಯಾವುದರಲ್ಲಿಯೂ ಕಡಿಮೆಯಲ್ಲವೆಂಬುದನ್ನೇ ಅಪ್ರತ್ಯಕ್ಷವಾದಿ ಒಪ್ಪಿಕೊಂ ಡಂತಾಯಿತು.

ಪ್ರೇಕ್ಷರಿಗೆ ಅಪ್ಪಣೆ ಕೊಡಬೇಕೆಂಬ ಬಗ್ಗೆ ಎರಡನೆಯ ಹೋರಾಟ ವನ್ನು ಹೂಡಲಾಯಿತು. ವಿಚಾರಣೆಯು ಲಾಹೋರಿನ ಕೇಂದ್ರಕಾರಾಗ್ರಹ ದಲ್ಲಿ ನಡೆಯುತ್ತಿತ್ತು. ಪ್ರೇಕ್ಷಕರಿಗೆ ಅಪ್ಪಣೆ ಕೊಡುವ ವಿಷಯವಾಗಿ ಅನೇಕ ಕಠಿಣ ನಿರ್ಬಂಧಗಳನ್ನು ಹಾಕಲಾಗಿತ್ತು. ಹೀಗಾಗಿ ಅಪ್ಪಣೆ ಪಡೆದು ಬರು ವುದು ತೀರ ಕಡಿಮೆ ಜನರಿಗೆ ಸಾಧ್ಯವಾಗುತ್ತಿತ್ತು. ಹೀಗಾದರೆ ಜನತೆಯ ಮೇಲೆ ಪರಿಣಾಮವಾಗುವಂತೆ ಮೊಕದ್ದಮೆಯನ್ನು ಉಪಯೋಗಿಸಿಕೊಳ್ಳುವ ತಮ್ಮ ಮೂಲೋದ್ದೇಶವೇ ಮೂಲೆಯನ್ನು ಕಾಣುವುದೆಂದು ಆ ಕ್ರಾಂತಿಕಾರಿ ಗಳಿಗೆ ವಿವಂಚನೆಯುಂಟಾಯಿತು. ಆದುದರಿಂದ ಪ್ರೇಕ್ಷಕರಿಗೆ ಅಪ್ಪಣೆ

ದೊರೆಯುವ ಮಾರ್ಗದಲ್ಲಿಯ ನಿರ್ಬಂಧಗಳು ಸಡಿಲಾಗಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರೇಕ್ಷಕರು ಬರಲು ಅನುಕೂಲವಾಗಬೇಕೆಂದೇ ಅವರು ಈ ಹೋರಾಟವನ್ನು ಹೂಡಿದರು. ಒಂದು ತಿಂಗಳ ವರೆಗೆ ಮಾಡಿದ ಸತತ ಪ್ರಯತ್ನದಿಂದ ಹಾಗೂ ಬಗೆಬಗೆಯ ಯುಕ್ತಿ—ಪ್ರಯುಕ್ತಿಗಳಿಂದ ಈ ಹೋರಾಟವೂ ಯಶಸ್ವಿಯಾಗಿ ಅನೇಕ ಪ್ರೇಕ್ಷಕರು, ಅದರಲ್ಲಿಯೂ ಹೆಚ್ಚಾಗಿ ಯುವಕ-ಯುವತಿಯರು ವಿಚಾರಣೆಯನ್ನು ಕೇಳಲಿಕ್ಕೆ ಬರಹತ್ತಿದರು. ಇದರಿಂದಾದ ಪರಿಣಾಮದಿಂದ ಈ ಹೋರಾಟದ ಮಹತ್ವವೂ ಪ್ರಯೋಜನವೂ ನಮ್ಮ ಗಮನಕ್ಕೆ ಬರಬಹುದು. ಪಂಜಾಬಿನಲ್ಲಿ ರಾಜಕೀಯ ಒಳಸಂಚುಗಳಿಗಾಗಿ ೬—೭ ಮೊಕದ್ದಮೆಗಳು ನಡೆದವು. ಅವುಗಳಲ್ಲಿ ಬಂಧಿತರಾದ ಬಹುತರ ಎಲ್ಲ ರಾಜಬಂದಿಗಳು ಈ ಒಳಸಂಚಿನ ವಿಚಾರಣೆಯನ್ನು ಕೇಳಿಯೇ ಸ್ಫೂರ್ತಿ ಪಡೆದಿದ್ದರೆಂದು ಖಚಿತವಾಗಿ ಸಿದ್ಧವಾಗಿದೆ.

ವಿಚಾರಣೆಯ ಕಾಲಕ್ಕೆ ಮಹತ್ವದ ಸಾಕ್ಷಿದಾರರ, ವಿಶೇಷವಾಗಿ ಮಾಫೀ ಸಾಕ್ಷಿದಾರರ ಮರುಸವಾಲನ್ನು ಸ್ವತಃ ಕೈದಿಗಳೇ ನಡೆಸುತ್ತಿದ್ದರು. ಸಾಕ್ಷಿದಾರರ ವಿಧಾನಗಳಲ್ಲಿಯ ವಿಪರ್ಯಾಸಗಳನ್ನೂ ಅಸತ್ಯ ಅಂಶಗಳನ್ನೂ ಎತ್ತಿ ತೋರಿಸುವುದು ಈ ಮರುಸವಾಲಿನ ಉದ್ದೇಶವೇ ಆಗಿರಲಿಲ್ಲ. ಆದರೆ ತಮ್ಮ ಧ್ಯೇಯದ ಸ್ಪಷ್ಟೀಕರಣ, ವಿಶಿಷ್ಟ ಕೃತ್ಯದ ಆಂತರಿಕ ಉದ್ದೇಶ, ಹೋರಾಟದೊಳಗಿನ ಶೌರ್ಯ, ಮತ್ತು ತಾವು ಅನುಸರಿಸಿದ ರೀತಿ ನೀತಿಯ ವರ್ಣನೆಯು ರೆಕಾರ್ಡಿನ ಮೇಲೆಯೂ ಜನತೆಯ ಮುಂದೆಯೂ ಬರಬೇಕೆಂಬುದೇ ಅವರ ಇಚ್ಛೆಯಾಗಿತ್ತು. ಇವುಗಳಿಂದ ಯುವಕರು ದೇಶದ ಬಂಧವಿಮೋಚನೆಯ ಹೋರಾಟದಲ್ಲಿ ಧುಮುಕಲು ಸ್ಫೂರ್ತಿಯನ್ನೂ ಮಾತೆಯ ಮುಕ್ತಿಯನ್ನು ಸಾಧಿಸಲು ಕ್ರಾಂತಿಯ ಶಿಕ್ಷಣವನ್ನೂ ಪಡೆಯಬೇಕೆಂಬುದೇ ಅವರ ಉದ್ದೇಶವಾಗಿತ್ತು.

ನ್ಯಾಯಾಲಯದಲ್ಲಿ ನಿದರ್ಶನಗಳನ್ನು ಮಾಡುವುದು ಸಹ ಜನತೆಯ ಭಾವನೆಗಳನ್ನು ಕಲಕಿ ಯುವಕರನ್ನು ಉತ್‌ಸ್ಫೂರ್ತಗೊಳಿಸುವ ಒಂದು ಪ್ರಭಾವೀ ಸಾಧನವಾಗಿತ್ತು. ನ್ಯಾಯಾಲಯದಲ್ಲಿ ಪ್ರವೇಶಿಸಿದ ಕೂಡಲೆ " ಕ್ರಾಂತಿಯು ಚಿರಾಯುವಾಗಲಿ " " ಜನತೆಯು ಚಿರಂಜೀವಿಯಾಗಲಿ " " ಸಾಮ್ರಾಜ್ಯಶಾಹಿಯು ನಾಶವಾಗಲಿ " ಎಂಬ ಘೋಷಣೆಗಳು ಪ್ರತಿನಿತ್ಯವೂ

ನಡೆಯುತ್ತಿದ್ದವು. ನ್ಯಾಯಾಲಯದ ಕಾರ್ಯವು ಆರಂಭವಾಗುವ ಮೊದಲು ಸಾಮೂಹಿಕವಾಗಿ ರಾಷ್ಟ್ರಗೀತೆಯನ್ನು ಹೇಳುವುದು ಪ್ರತಿದಿನದ ಪರಿಪಾಠವಾಗಿತ್ತು. ವಿಶೇಷಪ್ರಸಂಗಗಳಲ್ಲಿ ಸ್ಫೂರ್ತಿದಾಯಕ ಸಂದೇಶಗಳನ್ನು ಕೊಡುವುದೂ ಅವರಿಗೆ ಉಪಯುಕ್ತವೆನಿಸುತ್ತಿತ್ತು. "ಕಾಕೋರಿ ದಿನ", "ಲೆನಿನ್ ದಿನ", "ಮೇ ೧ನೆಯ ದಿನಾಂಕ", "ಲಜಪತರಾಯ ದಿನ" ಮತ್ತು ಶಾಮಜಿ ಕೃಷ್ಣವರ್ಮಾರವರು ತೀರಿಕೊಂಡ ಪ್ರಸಂಗ, ಹಂಗೇರಿಯಲ್ಲಿಯ ರಾಜಕೈದಿಯೊಬ್ಬನು ಅನ್ನತ್ಯಾಗದಿಂದ ಮೃತಪಟ್ಟ ಪ್ರಸಂಗ— ಇವೇ ಮೊದಲಾದ ಸಂದರ್ಭಗಳಲ್ಲಿ ನ್ಯಾಯಾಲಯದಲ್ಲಿಯೇ ನಿದರ್ಶನಗಳು ನಡೆದು ಸಂದೇಶಗಳು ಕೊಡಲ್ಪಟ್ಟವು. ಫಿರ್ಯಾದಿ ಪಕ್ಷದವರಿಗೂ ಈ ಕ್ರಾಂತಿಕಾರಿಗಳ ವಿರುದ್ಧ ಪುರಾವೆಯೆಂದು ಈ ಸಂದೇಶಗಳು ಉಪಯುಕ್ತವೆನಿಸುತ್ತಿದ್ದವು. ಆದರಿಂದ ಅವುಗಳನ್ನು ರೆಕಾರ್ಡಿನಲ್ಲಿ ಸೇರಿಸಲು ಅಪ್ಪಣೆ ದೊರೆಯುತ್ತಿತ್ತು. ಕ್ರಾಂತಿಕಾರಿಗಳ ದಿಟ್ಟತನದ ವರ್ತನೆ ಮತ್ತು ಅವರ ಜ್ವಲಂತ ದೇಶಭಕ್ತಿಯ ಪ್ರದರ್ಶನವನ್ನು ಪ್ರತ್ಯಕ್ಷನೋಡಿದ ಜನತೆಯ ಮೇಲೆ ಮಾತ್ರ ಈ ನಿದರ್ಶನಗಳ ಪರಿಣಾಮವು ವಿಲಕ್ಷಣವಾಗಿ ಆಗುತ್ತಿತ್ತು.

ನ್ಯಾಯಾಲಯದಲ್ಲಿ ನಡೆದ ಒಂದು ಚಿರಸ್ಮರಣೀಯ ವಿಷಯವೆಂದರೆ ಕೈದಿಗಳಿಗೆ ಬೇಡಿ ಹಾಕುವ ಪ್ರಸಂಗ. ಈ ಪ್ರಸಂಗವು ಉದ್ಭವಿಸಿದ ರೀತಿ ಇಂತು: ಒಂದು ದಿವಸ ಮಾಫೀ ಸಾಕ್ಷಿದಾರನಾದ ಜಯ ಗೋಪಾಲನು ಅತ್ಯಂತ ಉದ್ಧಾಮ ವೃತ್ತಿಯಿಂದ ಡಾಕ್ (Dock) ವನ್ನು ಪ್ರವೇಶಿಸಿದನು. ಬಳಿಕ ಅವನು ತನ್ನ ಮೀಸೆಯನ್ನು ಹುರಿಹಾಕುತ್ತ ಆರೋಪಿಗಳನ್ನು ಹೀಯಾಳಿಸುವುದಕ್ಕಾಗಿ ಅವರನ್ನುದ್ದೇಶಿಸಿ ಕೆಲವು ಕೊಂಕು ನುಡಿಗಳನ್ನಾಡಿದನು. ಎಲ್ಲ ರಾಜಬಂದಿಗಳೂ "Shame!" "Shame!" ("ನಾಚುಗೆ!" "ನಾಚುಗೆ!") ಎಂದು ಕೂಗಿದರು. ಅವರಲ್ಲಿ ಎಲ್ಲಕ್ಕೂ ಚಿಕ್ಕವನಾದ ಪ್ರೇಮದತ್ತನು ಉದ್ರೇಕಗೊಂಡ ಮನಸ್ಥಿತಿಯಲ್ಲಿ ತನ್ನ ಪಾದತ್ರಾಣವನ್ನು ತೆಗೆದು ಜಯಗೋಪಾಲನ ಕೆನ್ನೆಗೆ ಎಸೆದನು! ಇದ್ದಕ್ಕಿದ್ದಂತೆಯೇ ನ್ಯಾಯಾಲಯದ ಕೆಲಸವನ್ನು ನಿಲ್ಲಿಸಲಾಯಿತು. ಮತ್ತು ನ್ಯಾಯಾಲಯದಲ್ಲಿರುವಾಗ ಎಲ್ಲರಿಗೂ ಬೇಡಿ ಹಾಕಬೇಕೆಂದು ಆಜ್ಞಾಪಿಸಲಾಯಿತು ಆದರೆ ಏನೇ ಆದರೂ ಈ ಆಜ್ಞೆಯನ್ನು ರದ್ದುಗೊಳಿಸುವವರೆಗೆ ತಾವು ಕೋರ್ಟಿಗೆ ಬರಲಾರೆ

ವೆಂದು ಭಗತ್‌ಸಿಂಗನೂ ಅವನ ಜೊತೆಗಾರರೂ ನಿಶ್ಚಯಿಸಿದರು.

ಮರುದಿವಸ ಪೋಲೀಸರು ಶಾರೀರಿಕ ಬಲವನ್ನೆಲ್ಲ ಉಪಯೋಗಿಸಿದರು. ಒಬ್ಬ ಆರೋಪಿಯನ್ನೂ ನ್ಯಾಯಾಲಯಕ್ಕೆ ಒಯ್ಯುವುದು ಅವರಿಗೆ ಸಾಧ್ಯವಾಗಲಿಲ್ಲ. ಹದಿನಾರು ಆರೋಪಿಗಳಲ್ಲಿ ಐವರನ್ನು ಮಾತ್ರ ಮೋಟಾರಿನಿಂದ ಜೇಲಿನ ಬಾಗಿಲವರೆಗೆ ತಂದರು. ಆದರೆ ಏನು ಮಾಡಿದರೂ ಅವರನ್ನು ಮೋಟಾರಿನಿಂದ ಕೆಳಗೆ ಇಳಿಸಲು ಶಕ್ಯವಾಗಲಿಲ್ಲ. ಎರಡನೆಯ ದಿವಸ ಒಂದು ಷರತ್ತಿನ ಮೇಲೆ ಆರೋಪಿಗಳು ನ್ಯಾಯಾಲಯಕ್ಕೆ ಬರಲು ಒಪ್ಪಿ ಕೊಂಡರು. ನ್ಯಾಯಾಲಯಕ್ಕೆ ಹೋಗುವಾಗ ಬೇಡಿ ಹಾಕಬೇಕು, ಅಲ್ಲಿ ಹೋದ ಮೇಲೆ ಮಾತ್ರ ಬೇಡಿ ತೆಗೆಯಬೇಕೆಂಬುದೇ ಆ ಷರತ್ತು. ಹೇಗಾದರೂ ಮಾಡಿ ಅವರನ್ನು ನ್ಯಾಯಾಲಯಕ್ಕೆ ಒಯ್ದರೆ ಸಾಕೆಂದು ಅಧಿಕಾರಿಗಳೂ ಈ ಷರತ್ತಿಗೆ ಒಪ್ಪಿಕೊಂಡರು. ಆದರೆ ಅವರು ತಮ್ಮ ಆಶ್ವಾಸನವನ್ನು ಬದಿಗೀಸಿ ನ್ಯಾಯಾಲಯಕ್ಕೆ ಹೋದ ನಂತರವೂ ಬೇಡಿ ತೆಗೆಯಲಿಲ್ಲ. ಈ ರೀತಿ ತಮಗೆ ಮೋಸ ಮಾಡಿದ ಅಧಿಕಾರಿಗಳಿಗೆ ತಾವೂ ಯುಕ್ತಿಯಿಂದ ಮಂಕುಬೂದಿ ಹಚ್ಚಬೇಕೆಂದು ಆರೋಪಿಗಳು ಹೊಂಚುಹಾಕಿದರು. ಉಪಹಾರದ ಸಮಯ ಬಂದಾಗ ಉಪಹಾರದಲ್ಲಿ ಭಾಗವಹಿಸಲು ಅನುಕೂಲವಾಗುವಂತೆ ಒಂದೊಂದು ಕೈಯನ್ನು ಬೇಡಿಯಿಂದ ತೆಗೆಯಲಾಯಿತು. ಉಪಹಾರವಾದ ಬಳಿಕ ಪೋಲೀಸ ಅಧಿಕಾರಿಗಳು ಮತ್ತೆ ಬೇಡಿ ಹಾಕಲು ಬಂದರು. ಆಗ ಬೇಡಿ ಹಾಕಿಕೊಳ್ಳಲಿಕ್ಕೆ ಆರೋಪಿಗಳೆಲ್ಲರು ಸ್ಪಷ್ಟವಾಗಿ ನಕಾರವನ್ನಿತ್ತರು. ಒಮ್ಮೆಲೆ ಗುದ್ದಾಟಕ್ಕಾರಂಭವಾಯಿತು ಪಠಾಣರ ವಿಶೇಷ ದಲವೊಂದನ್ನು ಅಲ್ಲಿ ಇರಿಸಲಾಗಿತ್ತು. ಕೈದಿಗಳಿಗೆ ನಿರ್ದಯವಾಗಿ ಬಡೆಯುವುದಕ್ಕಾರಂಭವಾಯಿತು. ಈ ಹೊಡೆತದಲ್ಲಿ ಭಗತ್‌ಸಿಂಗನ ಮೇಲೆ ವಿಶೇಷ ಕಣ್ಣಿತ್ತು. ೮ ಜನ ಕ್ರೂರ ಪಠಾಣರು ಅವನ ಮೈಮೇಲೆ ಏರಿ ಹೋಗಿ ಬೂಟನಿಂದ ಒದೆಯಲಿಕ್ಕೂ ಬಡಿಗೆಯಿಂದ ಬಡಿಯಲಿಕ್ಕೂ ಕಡಿಮೆ ಮಾಡಲಿಲ್ಲ. ಬ್ರಿಟಿಷರು ನ್ಯಾಯಾಲಯಗಳನ್ನೇ ಭ್ರಷ್ಟ ಮಾಡಿ ಬಿಟ್ಟಿದ್ದರು. ಅವರು ನಿರ್ಮಿಸಿದ ನ್ಯಾಯಮಂದಿರಗಳಲ್ಲಿ ನ್ಯಾಯದೇವತೆಯ ಅಧಿಷ್ಠಾನವಿರಲಿಲ್ಲ. ಅಲ್ಲಿದ್ದುದು ಜುಲುಮೆ–ಒತ್ತಾಯಗಳ ಮೂರ್ತಿಮಂತ ಭೂತ ! ಆ ಭೂತದ ಸಂಚಾರವಾದುದರಿಂದ ನ್ಯಾಯಾಲಯದಲ್ಲೆಲ್ಲ ಸಾಮ್ರಾಜ್ಯಶಾಹಿಯ ಪಾಶವೀ

ಕ್ರೌರ್ಯವು ತಾಂಡವವಾಡಹತ್ತಿತು !!

ಬ್ರಿಟಿಷ್ ಸಾಮ್ರಾಜ್ಯಶಾಹಿಯು ನಡೆಸಿದ ದಬ್ಬಾಳಿಕೆಯ ಈ ನಗ್ನನೃತ್ಯವನ್ನು ಪ್ರೇಕ್ಷಕರು ಪ್ರತ್ಯಕ್ಷ ನೋಡಿದರು. ಅದರಿಂದ ಅನೇಕರ ಕಣ್ಣಲ್ಲಿ ನೀರೂರಿತು. ಅನ್ಯಾಯ ಅತ್ಯಾಚಾರಗಳ ಈ ದಬ್ಬಾಳಿಕೆಯನ್ನು ಕಿತ್ತೊಗೆಯಲು ಪ್ರಾಣಪಣದಿಂದ ಯತ್ನಿಸುತ್ತಿದ್ದ ಆ ಕ್ರಾಂತಿವೀರರ ಬಗ್ಗೆ ಎಲ್ಲರಿಗೂ ಸಹಾನುಭೂತಿಯೆನಿಸಹತ್ತಿತು. ಅವರಲ್ಲಿಯ ಅನೇಕ ಯುವಕರು ಉದ್ರೇಕಗೊಂಡರು. ಆನೇಕರು ಪರಕೀಯರ ಈ ಕ್ರೂರ ಪಾಶದಿಂದ ಮಾತೆಯ ಮುಕ್ತತೆಯನ್ನು ಮಾಡುವ ಮಂಗಲ ಪ್ರತಿಜ್ಞೆಯನ್ನು ಗೈದರು................ ಆ ಹೊತ್ತಿನ ದಿವಸ ಲಾಹೋರಿನಲ್ಲಿ ಒಂದು ಪ್ರಚಂಡ ಸಭೆ ಸೇರಿ ಪೋಲೀಸರ ಈ ಕೃತಿಯನ್ನು ಖಂಡತುಂಡವಾಗಿ ಟೀಕಿಸಲಾಯಿತು. ಆನೇಕ ವೃತ್ತಪತ್ರಿಕೆಗಳಲ್ಲಿಯೂ ಅದೇ ಅಭಿಪ್ರಾಯವನ್ನು ಬಲವಾಗಿ ಪ್ರತಿಪಾದಿಸಲಾಯಿತು. ಕೆಲವು ದಿವಸ ದೇಶದಲ್ಲೆಲ್ಲ ಒಂದು ಬಗೆಯ ವಿದ್ಯುತ್ಸಂಚಾರವಾದಂತಾಯಿತು.

ನ್ಯಾಯಾಲಯದಲ್ಲಿಯ ಹೊಡೆತದಿಂದಷ್ಟೇ ಸಂತುಷ್ಟರಾಗದೆ ಪೋಲೀಸರು ನ್ಯಾಯಾಲಯವೆದ್ದ ನಂತರವೂ ಮತ್ತೆ ತಮ್ಮ ಆಟವನ್ನೇ ಸಾಗಿಸಿದರು. ಜೈಲಿನ ಅಂಗಳದಲ್ಲಿ ಭಗತ್‌ಸಿಂಗನ ಮೈಮೇಲೆ ಬಿದ್ದು ಅವನನ್ನು ಕ್ರೂರತನದಿಂದ ಥಳಿಸಿದರು. ಆದರೆ ಈ ಎಲ್ಲ ನಿರ್ದಯ ಅತ್ಯಾಚಾರದ ಪರಿಣಾಮ ಮಾತ್ರ ಕ್ರಾಂತಿಕಾರಿಗಳಿಗೇ ಅನುಕೂಲವಾಯಿತು. ಪೋಲೀಸು ಅಧಿಕಾರಿಗಳು ಜೈಲ ಅಧಿಕಾರಿಗಳಿಗೆ ಸಮ್ಮತವಿದ್ದ ಪ್ರತಿವೃತ್ತವೊಂದನ್ನು ತಯಾರಿಸಿ “ಇವರನ್ನು ಬಡೆಯುವುದೂ ಕೊಲ್ಲುವುದೂ ಸಾಧ್ಯವಿದೆ. ಆದರೆ ನ್ಯಾಯಾಲಯಕ್ಕೆ ತರುವುದು ಮಾತ್ರ ಅಸಾಧ್ಯವಿದೆ” ಯೆಂದು ತಿಳಿಸಿದರು. ನ್ಯಾಯಾಧೀಶನು ನಿರುಪಾಯನಾಗಿ ತನ್ನ ಆಜ್ಞೆಯನ್ನು ರದ್ದುಗೊಳಿಸಬೇಕಾಯಿತು. ಈ ಪ್ರಕರಣದಲ್ಲಿ ನೈತಿಕ, ಮತ್ತು ವ್ಯಾವಹಾರಿಕ ಹೀಗೆ ದ್ವಿವಿಧ ವಿಜಯವನ್ನು ಕ್ರಾಂತಿಕಾರಿಗಳು ಸಂಪಾದಿಸಿದರು.

ಲಾಹೋರ ಒಳಸಂಚಿನ ಮೊಕದ್ದಮೆಯು ಭಾರತದಲ್ಲಿಯೂ ವಿದೇಶಗಳಲ್ಲಿಯೂ ಅಪೂರ್ವ ಪ್ರಸಿದ್ಧಿಯನ್ನು ಪಡೆಯಿತು. ವಿಶ್ವದ ದೂರದೂರದ ಭಾಗಗಳಿಂದಲೂ ‘ ಸಂರಕ್ಷಣಾ ಸಮಿತಿ ’ ಯ ಕಡೆಗೆ ಹಣ ಬರಹತ್ತಿತು. ಪೋಲಂಡದಿಂದ ಒಬ್ಬ ಸ್ತ್ರೀಯು ಹಣವನ್ನು ಕಳಿಸಿ ವಿಚಾರಣೆಯ ವಿವರ

ಗಳನ್ನು ನಿಯಮಿತವಾಗಿ ತಿಳಿಸಬೇಕೆಂದು ಬಿನ್ನವಿಸಿಕೊಂಡಳು. ಜಪಾನ, ಕಾನಡಾ, ದಕ್ಷಿಣ ಅಮೇರಿಕೆ ಮೊದಲಾದ ದೇಶಗಳಿಂದಲೂ ಕಾಣಿಕೆಗಳು ಕಳಿಸಲ್ಪಟ್ಟವು. ಭಗತ್‌ಸಿಂಗ-ದತ್ತ ದಿನಗಳನ್ನು ದೇಶದಲ್ಲೆಲ್ಲ ಆಚರಿಸಲಾಯಿತು. ಅವರ ಭಾವಚಿತ್ರಗಳನ್ನು ದಿನದರ್ಶಿಕೆ ( Calendars ) ಗಳಲ್ಲಿ ಉಪಯೋಗಿಸುವುದೊಂದು ಸಾಮಾನ್ಯ ಸಂಗತಿಯೇ ಆಗಿಬಿಟ್ಟಿತು.

ನ್ಯಾಯಾಲಯದಲ್ಲಿ ಅನೇಕ ಪ್ರಸಿದ್ಧ ಸಾರ್ವಜನಿಕ ಮುಂದಾಳುಗಳೂ ಈ ಕೈದಿಗಳಿಗೆ ಸಂದರ್ಶನವನ್ನಿತ್ತರು. ಸುಭಾಸಚಂದ್ರ ಬೋಸ್, ಮೋತೀಲಾಲ ನೆಹರೂ, ಬಾಬಾಗುರುದತ್ತಸಿಂಗ, ಶ್ರೀ. ನರಿಮನ್, ಶ್ರೀ.ಕಿಡವಾಯಿ ಶ್ರೀ. ಮೋಹನಲಾಲ ಸಕ್ಸೇನಾ ಇವರೇ ಸಂದರ್ಶನವಿತ್ತವರಲ್ಲಿ ಪ್ರಮುಖರು. ಮೋತಿಲಾಲರು ಅವರನ್ನು ಎರಡು ಸಲ ಕಂಡರು. ಎರಡನೆಯ ಸಲ ಹೋದಾಗ ಅವರು ಆರೋಪಿಗಳೊಡನೆ ಒಂದು ಗಂಟೆ ಕಾಲ ಕಳೆದರು.

ಈ ಮೊಕದ್ದಮೆಗೆ ದೊರೆತ ಪ್ರಸಿದ್ಧಿ, ಸಾರ್ವಜನಿಕರು ತೋರಿದ ಸಹಾನುಭೂತಿ, ಮತ್ತು ನ್ಯಾಯಾಲಯದಲ್ಲಿಯ ಕ್ರಾಂತಿಕಾರಿಗಳ ವರ್ತನೆ ಇವೆಲ್ಲವುಗಳ ಪರಿಣಾಮವು ದೇಶದಲ್ಲಿಯ ಯುವಕರ ಮೇಲೆ ಅತಿಶಯವಾಗುತ್ತಿರುವುದನ್ನು ಕಂಡು ಪಂಜಾಬ ಸರಕಾರವು ಹೆದರಿತು. ಮತ್ತು ನಿತ್ಯದ ನ್ಯಾಯಾಲಯದ ಮಾರ್ಗವನ್ನು ಬಿಟ್ಟು ಬೇರೆ ವಿಶೇಷ ಮಾರ್ಗವನ್ನನುಸರಿಸಬೇಕೆಂದು ಆಲೋಚನೆ ಮಾಡಿತು. ಈ ಮೊಕದ್ದಮೆಯ ಸಂಬಂಧದಲ್ಲಿ ಸುಗ್ರೀವಾಜ್ಞೆ ( Ordinance ) ಯನ್ನು ಹೊರಡಿಸಿ ಮೂವರು ನ್ಯಾಯಮೂರ್ತಿಗಳ ವಿಶೇಷ ನ್ಯಾಯಾಲಯದಲ್ಲಿ ವಿಚಾರಣೆಯನ್ನು ನಡೆಯಿಸಬೇಕೆಂದು ಪಂಜಾಬ ಸರಕಾರದ ವಿಚಾರವಾಗಿತ್ತು. ಆದರೆ ಹೀಗೆ ಮಾಡುವುದರಿಂದ ಜನತೆಯಲ್ಲಿ ಕ್ಷೋಭವುಂಟಾಗುವುದೆಂಬ ಭಯದಿಂದ ಭಾರತ ಸರಕಾರವು ಸುಗ್ರೀವಾಜ್ಞೆಗೆ ಮೊದಲು ಸಮ್ಮತಿಸಲಿಲ್ಲ. ಆದರೆ ಅಷ್ಟರಲ್ಲಿ ಕಾಂಗ್ರೆಸ್ ಮತ್ತು ಸರಕಾರಗಳಲ್ಲಿಯೇ ಹೋರಾಟಕ್ಕಾರಂಭವಾಗಿ ದಿನದಿನಕ್ಕೆ ಹೊಸ ಸುಗ್ರೀವಾಜ್ಞೆಗಳು ಹೊರಡಹತ್ತಿದವು. ಆದುದರಿಂದ ಜನತೆಯ ಪ್ರತಿಕ್ರಿಯೆಯ ಪ್ರಶ್ನೆಯೇ ಇಲ್ಲದಂತಾಗಿ ಪಂಜಾಬಸರಕಾರದ ಈ ಅಪ್ರತಿಮ ಸುಗ್ರೀವಾಜ್ಞೆಯು ( Lahore Conspiracy Case Ordinance of 1930 ) ೧೯೩೦ ರ ೩ ನೆಯ ಸುಗ್ರೀವಾಜ್ಞೆಯು ಜಾಹೀರ ಮಾಡಲ್ಪಟ್ಟಿತು.

ಬ್ರಿಟಿಷರ ನ್ಯಾಯಪ್ರಿಯತೆಯ ಟೊಳ್ಳುತನವನ್ನು ಬಹಿರಂಗಪಡಿಸಿ ತಾವು ಮತ್ತೊಂದು ಮಹತ್ವದ ವಿಜಯವನ್ನು ಪಡೆದೆವೆಂಬುದನ್ನು ಕ್ರಾಂತಿಕಾರಿಗಳು ಅರಿತುಕೊಂಡರು. ನ್ಯಾಯದ ನಾಟಕವನ್ನು ನಡೆಯಿಸುವುದು ಅವಶ್ಯವಾಗಿ ಈ ವಿಜಯದ ಸಂಪೂರ್ಣ ಲಾಭ ತಮಗೆ ದೊರೆಯಬೇಕೆಂದು ಭಗತ್‌ಸಿಂಗನು ಯೋಚಿಸಿದನು. ಆದುದರಿಂದ ಇನ್ನು ಮುಂದೆ ತಾವು ಯಾರೂ ನ್ಯಾಯಾಲಯಕ್ಕೆ ಹೋಗಬಾರದೆಂದು ಅವನ ಅಭಿಪ್ರಾಯವಾಗಿತ್ತು. ಭಗತ್‌ಸಿಂಗನು ಈ ಅಭಿಪ್ರಾಯಕ್ಕೆ ಬರಲು ಇನ್ನೊಂದು ಮಹತ್ವದ ಕಾರಣವೂ ಇತ್ತು. ಪರಕೀಯರಾದ ಬ್ರಿಟಿಷರು ನಿರ್ಮಿಸಿದ ನ್ಯಾಯಾಲಯಗಳಿಗೆ ಅವರೇ ಮಾಡಿದ ಕಾನೂನುಗಳನ್ವಯ ಭಾರತೀಯರನ್ನು ವಿಚಾರಣೆಗೆ ಗುರಿಪಡಿಸಿ ಶಿಕ್ಷಿಸುವ ಅಧಿಕಾರವೇ ಇಲ್ಲವೆಂಬುದು ಕ್ರಾಂತಿಕಾರಿಗಳ ಭೂಮಿಕೆಯಾಗಿತ್ತು. ಪರಕೀಯರ ಎಲ್ಲ ಅಧಿಕಾರಗಳನ್ನೂ ಅಲ್ಲಗಳೆಯುವುದೇ ಕ್ರಾಂತಿಕಾರಿಗಳ ಭೂಮಿಕೆಯಾಗಿತ್ತು. ನಾವು ಸ್ವತಂತ್ರರಿದ್ದೇವೆಂಬುದು ತ್ರಿಕಾಲಾಬಾಧಿತ ಸತ್ಯವಾಗಿದೆ. ಈ ಸ್ವಯಂಸಿದ್ಧ ಸತ್ಯವನ್ನು ಮರೆಮಾಡಲು ಮುಂದುವರಿದ ಪರಿಸ್ಥಿತಿಗೆ—ಪರಕೀಯರ ಪಾಶವೀ ಶಕ್ತಿಗೆ—ತಲೆ ಬಾಗದಿರುವುದು ಆ ಸನಾತನ ಸತ್ಯದ ಸಾಕ್ಷಾತ್ಕಾರದಿಂದುಂಟಾದ ಸಹಜ ಧರ್ಮವಾಗಿದೆ. ಈ ಸತ್ಯದ ಅಧಿಷ್ಠಾನದ ಮೇಲೆ ಸ್ಥಿರವಾಗಿ ನಿಂತಿರಲು ನಮ್ಮನ್ನು ಸ್ಥಾನಭ್ರಷ್ಟ ಮಾಡುವ ಕಾನೂನುಗಳ ಮತ್ತು ಆ ಕಾನೂನುಗಳ ಕಕ್ಷೆಯಲ್ಲಿಯೇ ನಿಂತು ನ್ಯಾಯವನ್ನು ಕೊಡುವ ನ್ಯಾಯಾಲಯಗಳ ಅಧಿಕಾರವನ್ನು ಮನ್ನಿಸುವುದೆಂದರೆ ನಮ್ಮ ಸ್ವಾತಂತ್ರ್ಯವನ್ನು ನಾವೇ ನಿರಾಕರಿಸಿದಂತೆ. ನಮ್ಮ ಜನ್ಮದೊಡನೆಯೇ ಪರಮೇಶ್ವರನು ಕಾಣಿಕೆಯಾಗಿ ಕೊಟ್ಟ ಪರಮ ಮಂಗಲ ಸ್ವಾತಂತ್ರ್ಯವನ್ನು ಅಪಹರಿಸುವುದಕ್ಕಾಗಿ ಮಾನವನು ತನ್ನ ಅಧಿಕಾರವನ್ನು ಉಪಯೋಗಿಸಹತ್ತಿದರೆ ಆ ಅಧಿಕಾರವನ್ನೇ ಅಲ್ಲಗಳೆದು ತಮ್ಮ ಸ್ವಾತಂತ್ರ್ಯವನ್ನು ಸ್ಥಿರಪಡಿಸುವುದು ಮನುಷ್ಯ ಮಾತ್ರರ ಪವಿತ್ರ ಕರ್ತವ್ಯವಾಗಿದೆ. ಈ ವಿಚಾರಸರಣಿಯನ್ನನುಸರಿಸಿಯೇ ಕ್ರಾಂತಿಕಾರಿಗಳು ನ್ಯಾಯಾಲಯದ ಅಧಿಕಾರವನ್ನು ಮನ್ನಿಸುತ್ತಿರಲಿಲ್ಲ. ತಾವಾದರೂ ನಿಜವಾದ ಕ್ರಾಂತಿಕಾರಿಗಳಂತೆ ನ್ಯಾಯಾಲಯದ ಅಧಿಕಾರವನ್ನು ನಿರಾಕರಿಸಿ ವಿಚಾರಣೆಯಲ್ಲಿ ಭಾಗವಹಿಸಬಾರದೆಂದು ಭಗತ್‌ಸಿಂಗನ ಅಭಿಪ್ರಾಯವಾಗಿತ್ತು. ಈವರೆಗೆ ವಿಚಾರಣೆಯಲ್ಲಿ ಭಾಗವಹಿಸಿ

ವ್ಯಾವಹಾರಿಕ ದೃಷ್ಟಿಯಿಂದ ಈ ಮೊಕದ್ದಮೆಯ ಸಂಪೂರ್ಣ ಲಾಭವನ್ನು ತಾವು ಪಡೆದದ್ದಾಗಿದೆ. ಇನ್ನು ಧ್ಯೇಯವಾದಿ ನಿಲುಮೆಯನ್ನಂಗೀಕರಿಸಿ ಮೊದಲೇ ಜನತೆಯ ಮೇಲೆ ಆದ ಪರಿಣಾಮವನ್ನು ಇನ್ನೂ ಹೆಚ್ಚುವಂತೆ ಮಾಡಬೇಕೆಂಬುದು ಅವನ ವಿಚಾರವಾಗಿತ್ತು. ಗಲ್ಲು ಮತ್ತು ಆಜೀವ ಕರಿ ನೀರು ಮೊದಲಾದ ಭಯಂಕರ ಶಿಕ್ಷೆಯ ದೃಶ್ಯವು ಕಣ್ಣಿಗೆ ಕಾಣುತ್ತಿದ್ದರೂ ಅದನ್ನು ಪೂರ್ಣವಾಗಿ ದುರ್ಲಕ್ಷಿಸಿ ಯಾವುದಕ್ಕೆ ನ್ಯಾಯವೆಂದು ಹೇಳದೆ "ಜುಲುಮೆ" ಯೆಂದು ಹೇಳಬಹುದೋ ಅದರಲ್ಲಿ ತಾವೂ ಒಂದು ಪಕ್ಷವಾಗದೆ ಇದ್ದರೆ ಇಂಥ ವೃತ್ತಿಯ ನೈತಿಕ ಪರಿಣಾಮವು ಯುವಕರ ಮೇಲೆ ಅಧಿಕವಾಗುವುದೆಂದು ಭಗತ್‌ಸಿಂಗನ ಪ್ರತಿಪಾದನೆಯಾಗಿತ್ತು. ಆದರೆ ಈ ವಿಷಯದಲ್ಲಿ ಅವರಲ್ಲಿ ಭಿನ್ನಾಭಿಪ್ರಾಯವಾಗಿ ಇಬ್ಬಣಗಳಾದವು. ಕ್ರಾಂತಿ ಪಕ್ಷಕ್ಕೆ ವ್ಯಾಸಪೀಠವಿಲ್ಲದ್ದರಿಂದ ನ್ಯಾಯಾಲಯದಲ್ಲಿಯ ವಿಚಾರಣೆಯನ್ನೇ ವ್ಯಾಸ ಪೀಠವನ್ನಾಗಿ ಉಪಯೋಗಿಸಿಕೊಳ್ಳಬೇಕೆಂದು ಪ್ರತಿಪಕ್ಷದ ಹೇಳಿಕೆಯಾಗಿತ್ತು. ಅಸೆಂಬ್ಲಿ ಕೇಸಿನಲ್ಲಿ ಭಗತ್‌ಸಿಂಗನು ಕೊಟ್ಟಂತೆ ತಾವೂ ಯೋಗ್ಯ ಸಮಯ ಬಂದೊಡನೆ ನ್ಯಾಯಾಲಯದಲ್ಲಿ ಧೈರ್ಯವಾಗಿ ಹೇಳಿಕೆಯನ್ನು ಕೊಡಬೇಕೆಂದು ಅವರ ವಾದವಾಗಿತ್ತು.

ಆದರೆ ಈ ವಾದವು ಒಂದು ವಿಚಿತ್ರ ರೀತಿಯಲ್ಲಿ ನಿರ್ಣಯಿಸಲ್ಪಟ್ಟಿತು. ಕೆಳಗಿನ ನ್ಯಾಯಾಲಯದಲ್ಲಿದ್ದಂತೆಯೇ ವಿಶೇಷ ನ್ಯಾಯಾಲಯದಲ್ಲಿಯೂ ಕ್ರಾಂತಿಕಾರಿಗಳು ಜಯಘೋಷಗಳನ್ನು ಮಾಡಿದರು. ಮತ್ತು ಅವರು ರಾಷ್ಟ್ರಗೀತೆಯನ್ನು ಹೇಳದೆ ನ್ಯಾಯಾಲಯದ ಕೆಲಸವು ಸಾಗುವಂತಿರಲಿಲ್ಲ. ಇದನ್ನು ಮೂವರೂ ನ್ಯಾಯಾಧೀಶರು ವಿರೋಧಿಸಿದರು. ಮತ್ತು ೩–೪ ದಿನಗಳಾದ ಮೇಲೆ ನ್ಯಾಯಾಲಯದಲ್ಲಿ ಆರೋಪಿಗಳಿಗೆ ಬೇಡಿ ಹಾಕಲು ಆಜ್ಞಾಪಿಸಿ ಅವರು ತಮ್ಮ ಅಧಿಕಾರವನ್ನು ಸಿದ್ಧಪಡಿಸಿದರು. ಕೆಳಗಿನ ನ್ಯಾಯಾಲಯದಲ್ಲಿಯ ದೃಶ್ಯದ ಪುನರಾವೃತ್ತಿಯಾಗಿ ಆಹೊತ್ತಿನ ಕೆಲಸವು ಅಷ್ಟಕ್ಕೇ ನಿಂತಿತು. ತಮಗೆ ದೊರೆತ ಈ ಅಪಮಾನಕಾರಕ ವರ್ತನೆಯಿಂದ ಎರಡನೆಯ ಗುಂಪಿನ ಆರೋಪಿಗಳೂ ರೊಚ್ಚಿಗೆದ್ದರು. ಹೀಗಾಗಿ ಎಲ್ಲರೂ ಒಮ್ಮತದಿಂದ ನ್ಯಾಯಾಲಯಕ್ಕೆ ಹೋಗಕೂಡದೆಂದು ನಿರ್ಣಯಿಸಿದರು. ಪೋಲೀಸರೂ ಜೈಲು ಅಧಿಕಾರಿಗಳೂ ತಮ್ಮ ಪೂರ್ವದ ಅನುಭವವನ್ನು

ಸ್ಮರಿಸಿ ಇವರನ್ನು ನ್ಯಾಯಾಲಯಕ್ಕೆ ತರುವುದು ಅಶಕ್ಯವಿದೆಯೆಂದು ಸಾರಿದರು. ನ್ಯಾಯದ ನಾಟಕವು ನಡೆಯಬೇಕೆಂದು ಅವರನ್ನು ನ್ಯಾಯಾಲಯದಲ್ಲಿ ಬರುವಂತೆ ಮಾಡಲು ಸರಕಾರವೂ ನಾನಾ ರೀತಿಯಿಂದ ಅವರ ಮನವೊಲಿಸಲೆತ್ನಿಸಿತು. ನ್ಯಾಯಾಲಯದಲ್ಲಿಯ ಹೊಡೆತಕ್ಕೂ ತಮಗಾದ ಅಪಮಾನಕ್ಕೂ ಹೊಣೆಗಾರನೆಂದು ಆರೋಪಿಗಳು ಸಾರಿದ ಅಧ್ಯಕ್ಷನನ್ನು ಬದಲಿಸುವವರೆಗೂ ಸರಕಾರದ ಮಟ್ಟುಹೋಯಿತು. ಆದರೆ ಆರೋಪಿಗಳು ತಮ್ಮ ನಿರ್ಧಾರವನ್ನು ಬದಲಿಸಲಿಲ್ಲ.

ಕೊನೆಗೆ ಒಂದೇ ಪಕ್ಷದ ವತಿಯಿಂದ (Exparte) ವಿಚಾರಣೆಯು ಮುಂದುವರಿದು ಕೊನೆಗೊಂಡಿತು. ನ್ಯಾಯಾಲಯದ ನಿರ್ಣಯವನ್ನು ಹೇಳುವ ದಿವಸವನ್ನು ಬೇಕಂತೆಯೇ ಗುಪ್ತವಾಗಿಡಲಾಗಿತ್ತು. ತೀರ್ಪು ಹೇಳುವ ಮೊದಲು ಮೂರನೆಯ ದಿವಸ ಸೆರೆಮನೆಯಲ್ಲಿ ಭೋಜನ ಸಮಾರಂಭವಾಯಿತು. ಸೆರೆಮನೆಯ ಅಧಿಕಾರಿಗಳೂ ಅದರಲ್ಲಿ ಭಾಗವಹಿಸಿದ್ದರು. ಪರಸ್ಪರರನ್ನು ಬೀಳ್ಕೊಡುವ ಸಮಾರಂಭವೂ ನಿರೋಪದ ಭಾಷಣಗಳೂ ನಡೆದವು. ತದನಂತರ ೩ ದಿವಸಗಳು ಅತ್ಯಂತ ಬಿಗುವಿನ ಮತ್ತು ಗಂಭೀರ ವಾತಾವರಣದಲ್ಲಿ ಉರುಳಿದವು. ಜೈಲು ಅಧಿಕಾರಿಗಳು ಬಿಕ್ಕಟ್ಟಿನ ಪ್ರಸಂಗ ಬಂದರೆ ಮುಂಜಾಗ್ರತೆಯೆಂದು ಸೆರೆಮನೆಯ ಸುತ್ತಲೂ ಸಶಸ್ತ್ರ ಪೋಲೀಸರ ಕಾವಲಿಟ್ಟಿದ್ದರು. ದಿ. ೭-೧೦-೧೯೩೦ ನೆಯ ದಿವಸ ವಿಶೇಷ ನ್ಯಾಯಾಲಯದಿಂದ ದೂತನೊಬ್ಬನು ಬಂದು ನ್ಯಾಯಾಲಯದ ಆಜ್ಞಾಪತ್ರಗಳನ್ನು ಕೊಟ್ಟು ಹೋದನು. ಅವುಗಳಲ್ಲಿ ಮೂರು ಆಜ್ಞಾಪತ್ರಗಳು ಕರೆಯ ಸೀಮಾರೇಖೆಗಳಿಂದ ಕಂಗೊಳಿಸುತ್ತಿದ್ದವು. ಅವು ಸುಖದೇವ, ಶಿವರಾಮ ರಾಜಗುರು ಮತ್ತು ಭಗತ್‌ಸಿಂಗರಿಗಾದ ಗಲ್ಲಿನ ಶಿಕ್ಷೆಯನ್ನು ಸೂಚಿಸುತ್ತಿದ್ದವು. ಉಳಿದವರಿಗೆ ಬೇರೆ ಬೇರೆ ಅವಧಿಯ ಶಿಕ್ಷೆಗಳು ವಿಧಿಸಲ್ಪಟ್ಟಿದ್ದವು.

ನ್ಯಾಯಾಲಯದ ತೀರ್ಪು ಹೊರಬಿದ್ದುದೊಂದೇ ತಡ. ಭಗತ್‌ಸಿಂಗ ಮೊದಲಾದವರಿಗೆ ಗಲ್ಲಿನ ಶಿಕ್ಷೆಯನ್ನು ಕೊಟ್ಟ ಸುದ್ದಿಯು ದಾವಾನಲದಂತೆ ನಗರದಲ್ಲೆಲ್ಲ ಹಬ್ಬಿತು. ಕೂಡಲೆ ನಗರದಲ್ಲಿ ೧೪೪ ನೇ ಕಲಮನ್ನು ಜಾರಿ ಮಾಡಲಾಯಿತು. ಆದರೂ ಯಾವ ಪೂರ್ವ ಸೂಚನೆಯೂ ಇಲ್ಲದೆ ನಗರ ದ್ವಾರದ ಹೊರಗೆ ದೊಡ್ಡದೊಂದು ಸಭೆ ಸೇರಿ ಏಕಪಕ್ಷೀಯ ವಿಚಾರಣೆ

ಯನ್ನೂ, ಆರೋಪಿಗಳಿಗೆ ವಿಧಿಸಿದ ಭಾರಿ ಶಿಕ್ಷೆಗಳನ್ನೂ ಟೀಕಿಸುವ ಭಾಷಣಗಳಾದವು. ಹಲವು ವೃತ್ತಪತ್ರಿಕೆಗಳು ವಿಶೇಷ ಸಂಚಿಕೆಗಳನ್ನು ಹೊರಡಿಸಿ ಎಲ್ಲ ರಾಜಬಂದಿಗಳ ಭಾವಚಿತ್ರಗಳನ್ನು ಪ್ರಕಟಿಸಿದವು. 'ಇವರು ಈ ಭಾವಚಿತ್ರಗಳನ್ನು ದೊರಕಿಸಿದರಾದರೂ ಎಲ್ಲಿಂದ?' ಎಂಬುದೇ ಪೋಲೀಸರಿಗೆ ಆಶ್ಚರ್ಯದ ವಿಷಯವಾಗಿತ್ತು.

ಮರುದಿವಸ ದಿ. ೮ ರಂದು ಲಾಹೋರಿನಲ್ಲಿಯೂ, ದಿಲ್ಲಿ, ಮುಂಬಯಿ, ಕಾನಪೂರ, ಪ್ರಯಾಗ, ಕಾಶಿ, ಕಲ್ಕತ್ತಾ, ಅಮೃತಸರ ಮೊದಲಾದ ಪ್ರಮುಖ ನಗರಗಳಲ್ಲಿಯೂ ಬಹಿರಂಗ ಸಭೆಗಳು ಸೇರಿ ಸರಕಾರವನ್ನು ಟೀಕಿಸುವ ಹಾಗೂ ಭಗತ್‌ಸಿಂಗ ಮೊದಲಾದವರಬಗ್ಗೆ ತಮಗಿದ್ದ ಸಹಾನುಭೂತಿಯನ್ನು ತೋರುವ ನಿರ್ಣಯಗಳು ಸ್ವೀಕೃತವಾದವು. ಲಾಹೋರ-ಅಮೃತಸರಗಳಲ್ಲಿ ಸಂಪೂರ್ಣ ಹರತಾಳ ಆಚರಿಸಲ್ಪಟ್ಟಿತು. ಶಾಲೆ-ಕಾಲೇಜುಗಳೂ, ಅಂಗಡಿಗಳೂ ಮುಚ್ಚಿದ್ದವಲ್ಲದೆ ಟಾಂಗಾ ಮೊದಲಾದ ವಾಹನಗಳೂ ವಿಶ್ರಾಂತಿಯನ್ನು ಪಡೆದಿದ್ದವು. ಲಾಹೋರದಲ್ಲಿ ಶಾಲೆಗಳ ಮುಂದೆ ನಿರೋಧನಮಾಡಿದ್ದಕ್ಕಾಗಿ ೧೭ ಸ್ತ್ರೀಯರು ಬಂಧಿಸಲ್ಪಟ್ಟಿದ್ದರು. ಒಬ್ಬ ಪ್ರೊಫೆಸರರೂ ೮೦ ವಿದ್ಯಾರ್ಥಿಗಳೂ ಲಾಠಿ ಪ್ರಹಾರದಿಂದ ಗಾಯಗೊಂಡರು. ಸಂಜೆಗೆ ಭಗತ್‌ಸಿಂಗ, ರಾಜಗುರು, ಸುಖದೇವ ಮೊದಲಾದವರ ಜಯಜಯಕಾರದೊಂದಿಗೆ ಲಾಹೋರಿನಲ್ಲಿ ಮೆರವಣಿಗೆ ಹೊರಟಿತ್ತು. ಬ್ರಾಡ್ಲೆ ಹಾಲಿನಲ್ಲಿ ವಿದ್ಯಾರ್ಥಿಗಳ ಸಭೆ ಸೇರಿ ಭಗತ್‌ಸಿಂಗ ಮೊದಲಾದವರ ವೀರ ಸ್ವಾರ್ಥತ್ಯಾಗದ ಬಗ್ಗೆ ಅವರನ್ನು ಅಭಿನಂದಿಸಲಾಯಿತು. ನೂರಿಗೇಟದ ಹೊರಗೆ ನಗರ ಸಭೆಯ ಬಯಲಲ್ಲಿ ಕಾಂಗ್ರೆಸ್ಸಿನ ವತಿಯಿಂದ ಶ್ರೀಮತಿ ಪಾರ್ವತಿದೇವಿಯರ ಅಧ್ಯಕ್ಷತೆಯಲ್ಲಿ ೧೨ ಸಾವಿರ ಜನರ ಸಭೆ ಸೇರಿತ್ತು.

ನ್ಯಾಯಾಲಯದ ತೀರ್ಪು ಪ್ರಕಟವಾದ ಕೂಡಲೆ ಪ್ರೀವ್ಹಿ ಕೌನ್ಸಿಲ್ಲಿಗೆ ಅಪೀಲು ಮಾಡುವ ಯೋಜನೆಯನ್ನು 'ಸಂರಕ್ಷಣಾ ಸಮಿತಿ' ಯು ತಯಾರಿಸಿತು. ಭಗತ್‌ಸಿಂಗ ಮೊದಲಾದವರು ಅಪೀಲಿಗೆ ತಮ್ಮ ಅನುಮತಿಯನ್ನು ಕೊಟ್ಟರು. ಅಪೀಲು ನಡೆಸುವಲ್ಲಿ ಅವರ ಉದ್ದೇಶಗಳು ತ್ರಿವಿಧವಾಗಿದ್ದವು. ಮೊದಲನೆಯದಾಗಿ ಪರದೇಶಗಳಲ್ಲಿ ಪ್ರಚಾರ ಮಾಡುವ ದೃಷ್ಟಿಯಿಂದ ಅಪೀಲಿನ ಉಪಯೋಗವು ಅತಿಶಯವಾಗುವುದೆಂದು ಮುಖ್ಯ ವಿಚಾರವಾಗಿತ್ತು.

ವಿಶೇಷ ನ್ಯಾಯಾಲಯವನ್ನೇರ್ಪಡಿಸುವುದಕ್ಕಾಗಿ ಹೊರಡಿಸಿದ ಸುಗ್ರೀವಾಜ್ಞೆಯನ್ನು ಸಮರ್ಥಿಸಿ ವ್ಹಾಯಿಸರಾಯರು ಕೆಲವು ವಿಧಾನಗಳನ್ನು ಮಾಡಿದ್ದರು. ನ್ಯಾಯಾಲಯದಲ್ಲಿ ಆರೋಪಿಗಳನುಸರಿಸಿದ ನಡತೆಯ ಮೂಲಕವೇ ಸುಗ್ರೀವಾಜ್ಞೆಯನ್ನು ಹೊರಡಿಸಬೇಕಾಯಿತೆಂದು ಅವರ ಸಮರ್ಥನೆಯಾಗಿತ್ತು. ಆರೋಪಿಗಳು ಮಾಡಿದ ಅನ್ನಸತ್ಯಾಗ್ರಹದ ಮತ್ತು ತನ್ಮೂಲಕ ವಿಚಾರಣೆಯಲ್ಲಿ ತಡೆಯುಂಟಾದ ವಿಷಯವನ್ನೂ ಅದರಲ್ಲಿ ಪ್ರಸ್ತಾಪಿಸಲಾಗಿತ್ತು. ಆಪೀಲಿನ ಸಂಧಿಯನ್ನು ಸಾಧಿಸಿ ತಮ್ಮ ವರ್ತನೆಯನ್ನು ಸಮರ್ಥಿಸಿ ವಾಯಿಸರಾಯರಿಗೆಸಮರ್ಪಕವಾದ ಉತ್ತರವನ್ನು ಕೊಡಬೇಕು ಮತ್ತು ಭಾರತದಲ್ಲಿಯ ರಾಜಬಂದಿಗಳನ್ನು ನಡೆಸಿಕೊಳ್ಳುವ ಅಮಾನುಷ ರೀತಿಯನ್ನೂ ವೀರ ಜತೀಂದ್ರನ ಸ್ವಾರ್ಥ ವಿರಹಿತ ಆತ್ಮಾರ್ಪಣೆಯನ್ನೂ ಸುಸಂಸ್ಕೃತ ಜಗತ್ತಿನೆದುರಿಗೆ ಇಡಬೇಕೆಂದು ಭಗತ್‌ಸಿಂಗನು ಬಗೆದಿದ್ದನು. ಎರಡನೆಯದಾಗಿ ಭಾರತದಲ್ಲಿರುವ ಸಾಮ್ಯವಾದಿ ಕ್ರಾಂತಿಪಕ್ಷದ ಅಸ್ತಿತ್ವವೆಡೆಗೆ ಇಂಗ್ಲಂಡಿನ ಶತ್ರುಗಳ ಲಕ್ಷವನ್ನೆಳೆಯುವ ವಿಚಾರವಿತ್ತು. ಅಂತೆಯೇ ಭಗತ್‌ಸಿಂಗನು ತನ್ನ ವಕೀಲರಿಗಿತ್ತ ಸೂಚನೆಯಲ್ಲಿ ತಾವು ಭಾರತದಲ್ಲಿಯ ಕ್ರಾಂತಿಕಾರಿಗಳಲ್ಲವೆಂದು ತೋರಿಸುವ ಯತ್ನವನ್ನು ಎಂದಿಗೂ ಮಾಡಬಾರದು. ಮತ್ತು ಬ್ರಿಟಿಷರು ಮಾಡಿದ ಕಾನೂನುಗಳ ಸಹಾಯದಿಂದ ಶಿಕ್ಷೆಗಳನ್ನು ಕಡಿಮೆ ಮಾಡಿಕೊಳ್ಳುವ ಯತ್ನವನ್ನೂ ಮಾಡಬಾರದೆಂದು ಸ್ಪಷ್ಟವಾಗಿ ತಿಳಿಸಿದ್ದನು.

ಮೂರನೆಯ ವಿಚಾರವು ರಾಜಕೀಯ ದೃಷ್ಟಿಯಿಂದ ಅತ್ಯಂತ ಉಜ್ವಲವಾಗಿತ್ತು. ಈ ವಿಷಯದಲ್ಲಿ ತೀಕ್ಷ್ಣ ರಾಜಕೀಯ ಬುದ್ಧಿಯುಳ್ಳ ವಿಜಯಕುಮಾರಸಿಂಹನ ಪ್ರಭಾವವು ಭಗತ್‌ಸಿಂಗನ ಮೇಲೆ ಬಿದ್ದಿತ್ತೆಂದು ಹೇಳಬೇಕಾಗುವುದು. ಗಲ್ಲಿನ ಶಿಕ್ಷೆಯು ಅತ್ಯಂತ ಪರಿಣಾಮಕಾರಿಯಾಗುವಂಥ ಸಮಯವು ಬರುವ ವರೆಗೆ ಅದು ಜಾರಿಗೆ ಬರುವ ದಿವಸವನ್ನು ಮುಂದೂಡುವುದೇ ಈ ವಿಚಾರವಾಗಿತ್ತು. ಕಾಂಗ್ರೆಸ್ಸು ನಡೆಸಿದ ದೇಶವ್ಯಾಪಿ ಆಂದೋಲನದ ಮೂಲಕ ವಾತಾವರಣವು ಪ್ರಕ್ಷುಬ್ಧವಾಗಿತ್ತು. ದಸ್ತಗಿರಿಗಳು, ಭಾರಿ ಶಿಕ್ಷೆಗಳು, ಲಾಠಿ ಪ್ರಹಾರ, ಗೋಳೀಬಾರ ಇವೇ ಮೊದಲಾದ ಕಾರಣಗಳಿಂದಾಗಿ ರಾಜಕೀಯ ವಾತಾವರಣವು ಕದಡಿತ್ತು. ಇಂಥ ಸಂದರ್ಭದಲ್ಲಿಯೇ ತಮ್ಮ ಗಲ್ಲಿನ ಶಿಕ್ಷೆಯು ಜಾರಿಯಾದರೆ ಜನತೆಯ ಲಕ್ಷವು ತಮ್ಮ ಬಲಿದಾನದಕಡೆಗೆ

ತೀವ್ರವಾಗಿ ಸೆಳೆಯಲ್ಪಡಲಾರದು; ಮತ್ತು ಸ್ವಲ್ಪ ಮಟ್ಟಿಗೆ ಸೆಳೆಯಲ್ಪಟ್ಟರೂ ದೇಶವ್ಯಾಪಿಆಂದೋಲನದ ಒಂದು ಭಾಗವೆಂದೇ ಅದು ಎಣಿಸಲ್ಪಟ್ಟು ಕ್ರಾಂತಿ ಪಕ್ಷದ ಕಾರ್ಯವೃದ್ಧಿಗೆ ಅದರ ಉಪಯೋಗವಾಗುವಂತಿರಲಿಲ್ಲ. ಭಗತ್ ಸಿಂಗನೂ ಅವನ ಪಕ್ಷವೂ ಕಾಂಗ್ರೆಸ್ಸು ಸರಕಾರದೊಡನೆ ಅವಮಾನಕಾರಕ ಒಪ್ಪಂದವನ್ನು ಮಾಡಿಕೊಳ್ಳುವುದೆಂದು ಮೊದಲೇ ಕಂಡುಹಿಡಿದಿದ್ದರು. ಅಂಥ ಒಪ್ಪಂದವಾಗಿ ಕಾಂಗ್ರೆಸ್ಸಿನ ಆಂದೋಲನವು ಶಾಂತವಾದ ಸಮಯದಲ್ಲಿ ತನ್ನನ್ನೂ ತನ್ನ ಗೆಳೆಯರನ್ನೂ ಗಲ್ಲಿಗೇರಿಸಿದರೆ ಕ್ರಾಂತಿಕಾರಿಗಳ ವೀರತ್ವವೂ ಕಾಂಗ್ರೆಸ್ಸಿನ ಅಸಮರ್ಥತೆಯೂ ಜನತೆಗೆ ಮನದಟ್ಟಾಗುವುದು. ನಿರ್ಬಲ ಆಂದೋಲನಗಳಲ್ಲಿಯ ಯುವಕರ ವಿಶ್ವಾಸವು ಹಾರಿ ಹೋಗಿ ಅವರು ಕ್ರಾಂತಿ ಕಾರಿಗಳಾಗುವರು. ಮತ್ತು ತಮ್ಮ ಕ್ರಾಂತಿಪಕ್ಷವು ಬಲಿಯುವುದು. ಭವಿಷ್ಯದ ವಿಷಯವಾಗಿ ಇದೇ ಅವರ ವಿಚಾರವಾಗಿತ್ತು. ಅಂತೆಯೇ ಇಂಥ ಅನುಕೂಲ ವಾತಾವರಣವು ನಿರ್ಮಾಣವಾಗುವ ವರೆಗೆ ತಮ್ಮನ್ನು ಗಲ್ಲಿಗೇರಿಸುವ ದಿವಸವು ಮುಂದೂಡಲ್ಪಟ್ಟರೆ ಉತ್ತಮವೆಂಬ ಅಭಿಪ್ರಾಯದಿಂದ ಅವರು ಅಪೀಲಿಗೆ ಅನುಮತಿಯಿತ್ತರು.

ದಿ. ೨೩—೩—೩೧ ಕ್ಕೆ ಅವರನ್ನು ಗಲ್ಲಿಗೇರಿಸಿದ್ದರಿಂದ ಭಗತ್‌ಸಿಂಗ ಮೊದಲಾದವರ ಈ ಆಂತರಿಕ ಇಚ್ಛೆಯೂ ಬಹುಮಟ್ಟಿಗೆ ಸಫಲವಾದದ್ದನ್ನು ನೋಡಿ ತನ್ನ ಮರಣದಲ್ಲಿಯೂ ಸರಕಾರವನ್ನು ಜಯಿಸಿದ ಭಗತ್‌ಸಿಂಗನ ಯುಕ್ತಿಯು ಕೌತುಕಾಸ್ಪದವೆನಿಸುವುದು.

## ಗಲ್ಲಿನ ಶಿಕ್ಷೆ

ದಿ. ೨೪ ಮಾರ್ಚ ಮಂಗಳವಾರ ದಿವಸ ಮುಂಜಾನೆ ಭಾರತದಲ್ಲೆಲ್ಲ ಅನೇಕ ನಗರಗಳ ಜನತೆಯಲ್ಲಿ ಕ್ಷೋಭವುಂಟಾದದ್ದನ್ನು ಕಾಣಬಹುದಿತ್ತು. ಸರದಾರ ಭಗತ್‌ಸಿಂಗನೂ ಅವನ ಇಬ್ಬರು ಜೊತೆಗಾರರೂ ಗಲ್ಲಿಗೇರಿಸಲ್ಪಟ್ಟರೆಂಬ ಸುದ್ದಿಯು ದಾವಾಗ್ನಿಯಂತೆ ಎಲ್ಲೆಲ್ಲಿಯೂ ಹಬ್ಬಿತು. ಮುಂಜಾವಿನ ಎಲ್ಲ ವೃತ್ತಪತ್ರಿಕೆಗಳೂ ದೊಡ್ಡ ಶಿರೋನಾಮಗಳಿಂದ ಈ ಸುದ್ದಿಯನ್ನು ಸಾರಿದವು. ಸರದಾರ ಭಗತ್‌ಸಿಂಗ, ಶ್ರೀ. ಶಿವರಾಮ ರಾಜಗುರು ಮತ್ತು ಶ್ರೀ.

ಸುಖದೇವ ಇವರು ದಿ. ೨೩ ಮಾರ್ಚಕ್ಕೆ ಲಾಹೋರ ಕೇಂದ್ರಕಾರಾಗ್ರಹದಲ್ಲಿ
ಸಂಜೆಯ ೭-೩೩ ಕ್ಕೆ ಗಲ್ಲಿಗೇರಿಸಲ್ಪಟ್ಟರೆಂಬುದು ಎಲ್ಲರಿಗೂ ಗೊತ್ತಾಯಿತು.
ಗಲ್ಲಿಗೇರಿಸುವ ಮೊದಲು ಮತ್ತು ಹಿಂದಿನಿಂದ ೧೫ ನಿಮಿಷಗಳ ವರೆಗೆ
" ಕ್ರಾಂತಿಯು ಚಿರಾಯುವಾಗಲಿ ! " ಎಂದು ಸೆರೆಮನೆಯಲ್ಲಿ ಉಚ್ಚಸ್ವರ
ದಿಂದ ಮಾಡಿದ ಜಯಘೋಷವು ಕೇಳಿಸುತ್ತಿತ್ತು.

ಚಿಕ್ಕಂದಿನಿಂದಲೇ ತನ್ನಲ್ಲಿ ವಿಶೇಷತ್ವದಿಂದ ವಾಸವಾಗಿದ್ದ ಶಾಂತತೆ
ಯಿಂದಲೂ ವೀರತ್ವದಿಂದಲೂ ಭಗತ್‌ಸಿಂಗನು ಈ ಗಲ್ಲಿನ ಶಿಕ್ಷೆಯನ್ನು ಸ್ವೀಕ
ರಿಸಿದನು. ತನ್ನಷ್ಟೇ ಶಾಂತವೃತ್ತಿಯನ್ನು ತಾಳಿದ ತನ್ನ ಇಬ್ಬರು ಜೊತೆಗಾರ
ರೊಡನೆ ಗಲ್ಲಿನ ಅಟ್ಟವನ್ನೇರುವಾಗ ಇವರನ್ನು ಗಲ್ಲಿಗೇರಿಸುವುದನ್ನು ನೋಡ
ಲಿಕ್ಕೆಂದು ಬಂದ ಒಬ್ಬ ಐರೋಪ್ಯ ಡೆಪ್ಯೂಟಿ ಕಮೀಶನರನನ್ನುದ್ದೇಶಿಸಿ ಭಗತ
ಸಿಂಗನು ನಗೆಮೊಗದಿಂದ ಹೀಗೆ ನುಡಿದನು: " ಮಹಾಶಯ! ತಮ್ಮ ಉಚ್ಚ
ಧ್ಯೇಯಕ್ಕಾಗಿ ಭಾರತೀಯ ಕ್ರಾಂತಿಕಾರಿಗಳು ಸಾವನ್ನು ಸಹ ಹೇಗೆ ಸಂತೋ
ಷದಿಂದ ಅಪ್ಪಿಕೊಳ್ಳುತ್ತಾರೆಂಬುದನ್ನು ನೋಡಲು ದೊರೆತದ್ದು ನಿಮ್ಮ
ಸದ್ಭಾಗ್ಯವೇ ಸರಿ ! "

ಪ್ರೀವಿ ಕೌನ್ಸಿಲ್ಲಿಗೆ ಮಾಡಿದ ಅಪೀಲು ವ್ಯರ್ಥವಾಗಲು ಶಿಕ್ಷೆಗಳನ್ನು
ಕಡಿಮೆ ಮಾಡುವುದಕ್ಕಾಗಿ ಒಂದು ಸಂಘಟಿತ ಮತ್ತು ಬಲವಾದ ಆಂದೋಲ
ನವನ್ನು ಮಾಡಲಾಯಿತು. ಜನತೆಗೆ ಗೊತ್ತಿರದಿದ್ದರೂ ಕೂಡ ಮಹಾತ್ಮ
ಗಾಂಧಿಯವರು ಈ ಮೂವರನ್ನು ಮರಣದ ದವಡೆಯೊಳಗಿಂದ ಬಿಡಿಸುವುದ
ಕ್ಕಾಗಿ ಪ್ರಾಮಾಣಿಕವಾಗಿ ಯತ್ನಿಸಿದರು. ಅವರನ್ನು ಗಲ್ಲಿಗೇರಿಸಿದರೆ ಭಾರ
ತೀಯರ ಮೇಲೆ ಅನಿಷ್ಟ ಪರಿಣಾಮವಾಗುವುದೆಂಬುದನ್ನು ಸರಕಾರದ ನಿದರ್ಶ
ನಕ್ಕೆ ತರುವುದಕ್ಕಾಗಿ ತರುಣ-ತರುಣಿಯರು ಅನೇಕ ನಿದರ್ಶನಗಳನ್ನು ಮಾಡಿ
ದರು. ಶಿಕ್ಷೆಯನ್ನು ಕಡಿಮೆ ಮಾಡುವುದಕ್ಕಾಗಿ ಇಷ್ಟು ದೊಡ್ಡ ಪ್ರಮಾಣದ
ಮೇಲೆ ಸ್ವಯಂಸ್ಫೂರ್ತಿಯಿಂದ ಬೇಡಿಕೆಯು ಬ್ರಿಟಿಷ್ ಹಿಂದುಸ್ಥಾನದ ಇತಿ
ಹಾಸದಲ್ಲಿ ಎಂದಿಗೂ ಮಾಡಲ್ಪಟ್ಟಿರಲಿಲ್ಲ. ಇಂಗ್ಲಂಡಿನಲ್ಲಿ ಕೂಡ ಈ ಆಂದೋ
ಲನಕ್ಕೆ ಸಹಾನುಭೂತಿ ದೊರೆಯಹತ್ತಿತು. ಈ ವಿಷಯದಲ್ಲಿ ಜನತೆಯ ಅಭಿ
ಪ್ರಾಯದ ಪ್ರಭಾವವು ವ್ಹಾಯಿಸರಾಯರ ಮೇಲೆಯೂ ಬಿದ್ದಿತೆಂದು ಹೇಳು
ತ್ತಾರೆ. ಹೀಗಾದದ್ದು ಭಗತ್‌ಸಿಂಗನ ಇಚ್ಛೆಗನುಗುಣವಾಗಿಯೇ.

ಬಳಿಕ ಯುವಕ ಪಕ್ಷದವರು ಶರಣಾಗತಿಯೆಂಗೇ ತಿಳಿದುಕೊಂಡಿದ್ದ ಒಪ್ಪಂದವು ಆಯಿತು. ಕಾಂಗ್ರೆಸ್ಸಿನ ಮುಖಂಡರು ಸಾರ್ವಜನಿಕ ಆಂದೋಲನವನ್ನು ಒಮ್ಮೆಲೆ ನಿಲ್ಲಿಸಿಬಿಟ್ಟರು. ಸರಕಾರವು ಬಿಡುಗಡೆಯ ಉಸಿರೊಂದನ್ನು ಬಿಟ್ಟಿತು..... ಮತ್ತು ಆಮೇಲೆ ಗಲ್ಲಿನ ಶಿಕ್ಷೆಯನ್ನು ಶಾಂತವಾಗಿ ಕೃತಿಯಲ್ಲಿಳಿಸಿತು. ಇದಾದರೂ ಭಗತ್‌ಸಿಂಗನ ಇಚ್ಛೆಯಂತೆಯೇ ಆಯಿತು. ತನ್ನ ವಿರೋಧಿಗಳ ಮೇಲೆ ಕೊನೆಯ ದಿವಸದಲ್ಲಿಯೂ ಜಯ ದೊರಕಿಸಬೇಕೆಂಬ ಭಗತ್‌ಸಿಂಗನ ಯತ್ನಗಳಿಗೆ ದೈವವು ಸಹಾಯವನ್ನೀಯುತ್ತಿತ್ತೇ ?

ಮೊದಲೇ ಹೇಳಿದಂತೆ ಗಲ್ಲಿಗೇರಿಸುವುದೂ ನಂತರದ ಘಟನೆಗಳೂ ಭಗತ್‌ಸಿಂಗ ಮತ್ತು ಅವನ ಜೊತೆಗಾರರ ಅಪೇಕ್ಷೆಯಂತೆಯೇ ಒದಗಿ ಬಂದವು. ಗಲ್ಲಿಗೇರಿಸಲ್ಪಟ್ಟ ಭಗತ್‌ಸಿಂಗನು ಜೀವಂತ ಭಗತ್‌ಸಿಂಗನಿಗಿಂತ ಯುವಕ ಪಕ್ಷಕ್ಕೆ ಹೆಚ್ಚಿಗೆ ಉಪಯುಕ್ತನಾದನು. ಪಂಡಿತ ಜವಾಹರಲಾಲರು ಎಷ್ಟು ಉಪಯುಕ್ತವಾಗಿ ನುಡಿದಿದ್ದಾರೆ: "............ಯಾವನು ಇಲ್ಲದಂತಾಗಿದ್ದಾನೆಯೋ ಅವನ ಬಗ್ಗೆಯೂ ಅಭಿಮಾನವಿರುವುದುಂಟು. ಮತ್ತು ಯಾವಾಗ ಇಂಗ್ಲಂಡು ನಮ್ಮೊಡನೆ ಮಾತುಕತೆಗಳನ್ನು ನಡೆಸುತ್ತದೆಯೋ ಮತ್ತು ಒಪ್ಪಂದದ ಮಾತುಕತೆಗಳನ್ನಾಡುತ್ತದೆಯೋ ಆಗ ನಮ್ಮೀರ್ವರ ನಡುವೆ ಭಗತ್‌ಸಿಂಗನ ಮೃತದೇಹವು ನಾವು ಮರೆಯಬಾರದೆಂದು ಬಿದ್ದುಕೊಂಡಿದೆ."

ತಾನು ಬಹಳವಾಗಿ ಪ್ರೀತಿಸಿದ ತನ್ನ ತಮ್ಮ ಕರ್ತಾರಸಿಂಗನಿಗೆ ಬರೆದ ಕೊನೆಯ ಓಲೆಯಲ್ಲಿ ಭಗತ್‌ಸಿಂಗನು ಹೀಗೆ ಬರೆದಿದ್ದಾನೆ: "ಅರುಣೋದಯದ ಬೆಳಕಿನಲ್ಲಿ ವಿಧಿಯನ್ನು ಯಾರು ಜಯಿಸಬಲ್ಲರು ? ಇಡಿ ಲೋಕವೇ ನನಗೆ ವಿರುದ್ಧವಾಗಿ ನಿಂತರೂ ಏನು ಹಾನಿಯಾಗುವಂತಿದೆ ?........ ಒಲವಿನ ಗೆಳೆಯರೆ ! ನನ್ನ ಜೀವನದ ದಿವಸಗಳು ಮುಗಿಯುತ್ತ ಬಂದಿವೆ. ಮುಂಜಾವಿನಲ್ಲಿ ಮಾಯವಾಗುವ ಮೇಣಬತ್ತಿಯ ಜ್ವಾಲೆಯಂತೆ ನಾನು ಅರುಣೋದಯದ ಬೆಳಕಿನಲ್ಲಿ ಮಾಯವಾಗುತ್ತಿದ್ದೇನೆ. ನಮ್ಮ ಧ್ಯೇಯನಿಷ್ಠೆಯೂ ವಿಚಾರಧಾರೆಯೂ ಮಿಂಚಿನಂತೆ ಇಡಿ ಲೋಕವನ್ನೇ ಅಲ್ಲೋಲ-ಕಲ್ಲೋಲ ಮಾಡಿ ಬಿಡುವುದು. ಈ ಹಿಡಿ ಮಣ್ಣು ನಾಶಹೊಂದಿದರೇನು ಹಾನಿ ?"

ಈ ಮೂವರು ಕ್ರಾಂತಿಕಾರಿಗಳಿಗೆ ಗಲ್ಲಿಗೇರಿಸಿದ ಘಟನೆಯನ್ನು ಶಿಖ್ ಕ್ರಾಂತಿಕಾರಿ ಶ್ರೀ. ಗುಲಾಬ್ ಸಿಂಗ್ ಅವರು ತಮ್ಮ "Thorns and Thistles" ಎಂಬ ಪುಸ್ತಕದಲ್ಲಿ ಮನ ಕರಗುವ ಹಾಗೆ ಬಣ್ಣಿಸಿದ್ದಾರೆ:—

"೧೯೩೧ರ ಮಾರ್ಚ ೨೩ ರಂದು ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಮುಳುಗುವುದಕ್ಕೆ ಮುಂಚೆಯೇ ಕೆಲಸವೆಲ್ಲಾ ಮುಗಿದು ಹೋಗಿತ್ತು. ಮೃತ್ಯುವಿನ ಕರಾಳ ದವಡೆಯಲ್ಲಿ ಮೂರು ಅಮೂಲ್ಯ ರತ್ನಗಳ ಆಹುತಿಯಾಯಿತು. ಸೂರ್ಯನು ಉದಯಾಚಲದಲ್ಲಿ ಇನ್ನೂ ಇಣಿಕಿ ನೋಡುತ್ತಿರುವಾಗಲೇ ಗಲ್ಲಿಗೇರಿಸುವುದು ಮುಂಚಿನಿಂದ ನಡೆದುಬಂದ ಪರಿಪಾಠ. ಇವರ ವಿಷಯದಲ್ಲಿ ಮಾತ್ರ ಈ ಪದ್ಧತಿಯನ್ನು ಸಹ ತಿರುವು ಮುರುವು ಮಾಡಲಾಯಿತು. ಆ ಹೊತ್ತು ನಮ್ಮನ್ನೂ ಎಲ್ಲಾ ಕೈದಿಗಳನ್ನೂ ಮಧ್ಯಾಹ್ನವೇ ಕೊಠಡಿಯಲ್ಲಿ ಹಾಕಿ ಬಿಟ್ಟಿದ್ದರು.

ಸರದಾರ ಭಗತ್‌ಸಿಂಗನು ತನ್ನ ಇಬ್ಬರು ಸಹಕಾರಿಗಳೊಡನೆ ಮಾತನಾಡಿದ ಶಬ್ದವು ನಮಗೆ ಕೇಳಿಸಿತು. "ಅಕೋ, ಅಲ್ಲಿ ನೋಡಿ! ಅವರು ಬರುತ್ತಿದ್ದಾರೆ!!" ನಮ್ಮ ದೇಹವೆಲ್ಲಾ ರೋಮಾಂಚವಾಯಿತು. ಅವರು ಮೂವರೂ ಜಯಘೋಷ ಮಾಡಿದರು. 'ಕ್ರಾಂತಿಯು ಚಿರಾಯುವಾಗಲಿ!' 'ಕ್ರಾಂತಿಯು ಚಿರಾಯುವಾಗಲಿ!' 'ಕ್ರಾಂತಿಯು ಚಿರಾಯುವಾಗಲಿ!' ಅವರು ಘೋಷಣೆ ಮಾಡಿದಷ್ಟು ಬಾರಿಯೂ ನಾವೆಲ್ಲಾ ಅದೇ ಘೋಷಣೆಗಳನ್ನು ಉಚ್ಚ ಸ್ವರದಲ್ಲಿ ಪುನರುಚ್ಚರಿಸಿ ಅವರೊಡನೆ ದನಿಗೂಡಿಸಿದೆವು.

ಇದಾದ ನಂತರ ಐದು ನಿಮಿಷಗಳು ಸಹ ಕಳೆದಿರಲಿಕ್ಕಿಲ್ಲ. ಅಷ್ಟರೊಳಗಾಗಿಯೇ ಕೆಲಸವೆಲ್ಲಾ ಮುಗಿದು ಹೋಗಿತ್ತು.

ಹುತಾತ್ಮರ ಮೃತದೇಹಗಳನ್ನು ದೊಡ್ಡ ಬಾಗಿಲಿನಿಂದ ಹೊರಗೆ ತೆಗೆಯಲಿಲ್ಲ. ನಮ್ಮ ಮೊಕದ್ದಮೆಯನ್ನು ನಡೆಸುತ್ತಿದ್ದ ವಿಶೇಷ ನ್ಯಾಯಾಲಯವು 'ಪರದೆ'ಯ ಹಿಂದೆ ಕೂಡುತ್ತಿದ್ದ ಸ್ಥಳದ ಹಿಂಭಾಗದಲ್ಲಿ ಒಂದು ಸಣ್ಣ ಬಾಗಿಲಿತ್ತು. ಅಲ್ಲಿಂದ ಅವರ ದೇಹಗಳನ್ನು ಸಾಗಿಸಿದರು. ಅವರ ದೇಹಗಳನ್ನು ಸ್ನೇಹಿತರ ಅಥವಾ ಆಪ್ತಬಾಂಧವರ ವಶಕ್ಕೆ ಒಪ್ಪಿಸಲಿಲ್ಲ. ಲಾರಿಯಲ್ಲಿ ಹಾಕಿ ಸೀದಾ ಸತಲಜ ನದಿಯ ತೀರಕ್ಕೆ ಕೊಂಡೊಯ್ದು ಅರ್ಧಮರ್ಧ ದಹನ ಮಾಡಿ ಹಾಗೆಯೇ ನದಿಯಲ್ಲಿ ಬಿಸಾಕಿದರು.

ಅವರನ್ನು ಗಲ್ಲಿಗೇರಿಸಿದ ತಕ್ಷಣ ‘ ಧಡ್ ’ ಎಂದು ಹಲಗೆ ಬಿದ್ದ ಶಬ್ದ ವನ್ನು ಕೇಳಿ ನಾವು ದುಃಖದಿಂದ ಮತ್ತು ರೊಚ್ಚಿನಿಂದ ಮೈಮರೆತೆವು. ಗಟ್ಟಿ ಯಾಗಿ ಕ್ರಾಂತಿಕಾರಿ ಘೋಷಣೆಗಳನ್ನು ಮಾಡಲಾರಂಭಿಸಿದೆವು. ಮತ್ತು ಕೊಠಡಿಗಳ ಕಬ್ಬಿಣದ ಬಾಗಿಲುಗಳನ್ನು ‘ ಗದಗದ ’ ನೆ ಅಲ್ಲಾಡಿಸಿ ಬಿಲಗೊ ಳಿಸಿದೆವು. ಸೆರೆಮನೆಯೊಳಗಿನ ಈ ಅಲ್ಲೋಲ ಕಲ್ಲೋಲವನ್ನೂ ಕೂಗಾಟದ ಧ್ವನಿಯನ್ನೂ ಕೇಳಿ ಹತ್ತಿರದ ನಾಗರಿಕರಿಗೆ ಒಳಗಡೆ ಏನು ನಡೆದಿರಬಹುದೆಂ ಬುದು ಗೊತ್ತಾಯಿತು. ದೇಹಗಳನ್ನು ಸಾಗಿಸಿದ ಲಾರಿಗಳ ಹಿಂದೆಯೇ ನಾಗರಿಕರ ಕಾರುಗಳೂ ಬಸ್ಸುಗಳೂ ಧಾವಿಸಿ ಹೋದವು. ಸತಲಜ್ ನದಿಯ ದಡದಲ್ಲಿ ಅವರಿಗೆ ಹುತಾತ್ಮರ ಭಗ್ನ ಅಸ್ಥಿಗಳು ಮಾತ್ರ ದೊರೆತವು.”

## ವಿವಿಧ ವ್ಯಕ್ತಿದರ್ಶನ

ಸರದಾರ ಭಗತ್‌ಸಿಂಗನು ೫ ಫೂಟು ೧೦ ಇಂಚು ಎತ್ತರದ ದೃಢ ಕಾಯದ ಸುಂದರ ಯುವಕನಾಗಿದ್ದನು. ಸಂಗೀತಕ್ಕೆ ಯೋಗ್ಯವಾದ ಮಧುರ ಕಂಠವು ಆತನಿಗಿದ್ದು ಅವನು ಭಾವನಾಪೂರ್ಣವಾದ ರೀತಿಯಲ್ಲಿ ಹಾಡಬಲ್ಲ ವನಾಗಿದ್ದನು. ಅಸೆಂಬ್ಲಿ ಬಾಂಬ್ ಮೊಕದ್ದಮೆಯ ಶಿಕ್ಷೆ ವಿಧಿಸಿಯಾದನಂತರ ಒಂದು ದಿವಸ ಅವನ ವಕೀಲರಾದ ಅಸಫ್ ಅಲಿಯವರು ತಮ್ಮ ಪತ್ನಿಯೊ ಡನೆ ಅವನ ಸಂದರ್ಶನಕ್ಕೆಂದು ಹೋಗಿದ್ದರು. ಭಗತ್‌ಸಿಂಗನು ಸೆರೆಮನೆ ಯಲ್ಲಿಯ ಚಿಕ್ಕ ಕೋಣೆಯೊಂದರಲ್ಲಿ ಬಂಧಿಸಲ್ಪಟ್ಟಿದ್ದನು. ಅವನಿಗೆ ಬೇಡಿ ಗಳನ್ನು ಹಾಕಲಾಗಿತ್ತು. ಇವರಿಬ್ಬರು ಆ ಕೋಣೆಯ ಸಮೀಪಕ್ಕೆ ಬಂದಂತೆ ತಾಲಬದ್ಧ ಶಬ್ದದ ಜೊತೆಗೆ ಹಾಡುವ ಮಧುರ ಮೃದು ಧ್ವನಿಯೊಂದು ಕೇಳಿಸಹತ್ತಿತು. ಅವರು ಮೆಲ್ಲಗೆ ಹೆಜ್ಜೆಯನ್ನಿಡುತ್ತ ಅಲ್ಲಿಗೆ ಬಂದು ನೋಡು ತ್ತಾರೆ—ಭಗತ್‌ಸಿಂಗನು ಬಾಲಕನಂತೆ ಹಾಡುತ್ತಿದ್ದಾನೆ. ಮತ್ತು ಕೈಯಲ್ಲಿಯ ಬೇಡಿಗಳನ್ನು ಬಾರಿಸಿ ತಾಳ ಹಾಕುತ್ತಿದ್ದಾನೆ !

ಅವನ ಅಂತಃಕರಣವು ಸಹಾನುಭೂತಿಪೂರ್ಣವೂ ಭಾವನಾಮಯವೂ ಆಗಿದ್ದಿತು. ಸಾಹಿತ್ಯದಲ್ಲಿಯ ಪಾತ್ರಗಳಲ್ಲಿಯೂ ಅವನು ಅಪ್ರತಿಮ ಉತ್ಸಾಹ ವನ್ನು ತೋರುತ್ತಿದ್ದನು. ಮತ್ತು ಅವರೊಡನೆ ದುಃಖಿಸುವುದೂ ಸಂತೋಷ

ಪಡುವುದೂ ಅವನ ರೂಢಿಯೇ ಆಗಿಬಿಟ್ಟಿತ್ತು. ವಿಶೇಷ ನ್ಯಾಯಾಧೀಶರ ಕೋರ್ಟಿನಲ್ಲಿ ಮೊಕದ್ದಮೆ ನಡೆದಾಗ ಲಿಯೊ ನಾಯಿಡ್ ಆಂಡ್ರೀವರ ( Leonoid Andrieve ) " ಗಲ್ಲಿಗೇರಿಸಲ್ಪಟ್ಟ ಏಳು ಜನರು " ( Seven that were hanged ) ಎಂಬ ಉತ್ತಮ ಕಾದಂಬರಿಯನ್ನು ಅವನು ನಮಗೆ ಗಟ್ಟಿಯಾಗಿ ಓದಿ ತೋರಿಸುತ್ತಿದ್ದನು. ಗಲ್ಲಿನ ಶಿಕ್ಷೆಯನ್ನು ಕೇಳಿದ ಕೂಡಲೆ ನಡುಗಿದ ಪಾತ್ರವೊಂದಿದೆ ಆ ಕಾದಂಬರಿಯಲ್ಲಿ. " ನಾನು ಗಲ್ಲಿಗೇರಿಸಲ್ಪಡ ಲಾರೆ " ನೆಂದು ಅವನು ಯಾವಾಗಲೂ ಅನ್ನುತ್ತಿದ್ದನು. ಮತ್ತು ಇದೇ ಮಾತನ್ನು ನಂಬುತ್ತಿದ್ದನು. ಗಲ್ಲಿನ ಸ್ಥಳಕ್ಕೆ ಒಯ್ಯಲ್ಪಡುವಾಗ ಕೂಡ " ನಾನು ಗಲ್ಲಿಗೇರಿಸಲ್ಪಡಲಾರೆ " ನೆಂದು ಅನ್ನುತ್ತಿರುವ ಈ ದುರ್ಬಲ ಮತ್ತು ನಿಂದನೀಯ ಮನುಷ್ಯನ ಜೀವನದಲ್ಲಿಯ ಕೊನೆಯ ಪ್ರಸಂಗವನ್ನು ಭಗತ್ ಸಿಂಗನು ಓದುತ್ತಿದ್ದನು. ಅವನು ನಕ್ಕನು. ಅವನ ಕಣ್ಣುಗಳು ನೀರಿನಿಂದ ತುಂಬಿದ್ದವು. ಮರಣಕ್ಕೆ ಹೆದರುವ ಒಬ್ಬ ಮನುಷ್ಯನಿಗಾಗಿ ಮರಣದ ಕಲ್ಪನೆ ಯನ್ನು ಜಯಿಸಿದ ವೀರನೊಬ್ಬನು ಸುರಿಸುತ್ತಿರುವ ಕಣ್ಣೀರಿನ ಪರಿಣಾಮವು ಶ್ರೋತೃಗಳಾದ ನಮ್ಮ ಮೇಲೆ ಆಗದೆ ಇರಲಿಲ್ಲ.

ಭಗತ್‌ಸಿಂಗನು ಅನೇಕ ಪುಸ್ತಕಗಳನ್ನೋದಿ ಅಭ್ಯಾಸವನ್ನು ಮಾಡಿದ ವನಾಗಿದ್ದನು. ಸಮಾಜವಾದವು ಅವನ ಅಭ್ಯಾಸದ ವಿಶೇಷ ವಿಷಯವಾ ಗಿತ್ತು. ಲಾಹೋರಿನ ಒಳಸಂಚಿನ ಮೊಕದ್ದಮೆಯಲ್ಲಿ ಸೇರಿದ ಯುವಕರ ಗುಂಪು ಪೂರ್ಣವಾಗಿ ಬುದ್ಧಿವಾದಿಯಾಗಿತ್ತು. ಆದರೆ ಈ ಗುಂಪಿನಲ್ಲಿಯೂ ತನ್ನ ಬೌದ್ಧಿಕ ಶ್ರೇಷ್ಠತೆಯ ಮೂಲಕ ಭಗತ್‌ಸಿಂಗನು ತನ್ನ ಪ್ರಭುತ್ವವನ್ನು ಸ್ಥಾಪಿಸಿದ್ದನು. ಸಮಾಜವಾದವು ಅವನ ವಿಶೇಷ ವಿಷಯವಾಗಿದ್ದರೂ ರಶಿ ಯನ್ ರಾಜ್ಯಕ್ರಾಂತಿಯ ಆಂದೋಲನದ ೨೦ ನೆಯ ಶತಮಾನದ ಆರಂಭ ದಿಂದ ೧೯೧೭ ರ ಅಕ್ಟೋಬರ ಕ್ರಾಂತಿಯ ವರೆಗಿನ ಇತಿಹಾಸವನ್ನು ಅವನು ಆಳವಾಗಿ ಅಭ್ಯಾಸಿಸಿದ್ದನು. ಈ ವಿಶಿಷ್ಟ ವಿಷಯದಲ್ಲಿ ಅವನಿಗಿದ್ದಷ್ಟು ಜ್ಞಾನವು ಭಾರತದಲ್ಲಿ ತೀರ ಕಡಿಮೆ ಜನರಿಗಿತ್ತೆಂದು ಸಾಮಾನ್ಯವಾಗಿ ನಂಬು ಲಾಗಿದೆ. ಬೋಲ್ಶೆವಿಕ್ ಆಡಳಿತದಲ್ಲಿ ನಡೆದ ಆರ್ಥಿಕ ಪ್ರಯೋಗಗಳ ಕಡೆಗೂ ಅವನು ಬಹಳ ಲಕ್ಷ ಕೊಡುತ್ತಿದ್ದನು.

ಸಾಹಿತ್ಯವನ್ನೂ ಅವನು ಉತ್ಸುಕತೆಯಿಂದ ಓದುತ್ತಿದ್ದನು. ರಾಜಕೀಯ

ಆರ್ಥಿಕ ಸ್ವರೂಪದ ಸಾಹಿತ್ಯವೇ ಅವನ ಪ್ರೀತಿಯ ವಿಷಯವಾಗಿತ್ತು. ಉಚ್ಚ ತರಗತಿಯ ಜನಜೀವನವನ್ನು ಚಿತ್ರಿಸುವ ಅಥವಾ ಕೇವಲ ಪ್ರಣಯ ಮೊದಲಾದ ಮಾನವನ ವಿಕಾರಗಳನ್ನು ಚಿತ್ರಿಸುವ ಕಾದಂಬರಿಗಳು ಅವನಿಗೆ ಸೇರುತ್ತಿದ್ದಿಲ್ಲ. ಅವನಿಗೆ ಬಹಳವಾಗಿ ಸೇರುತ್ತಿದ್ದ ಚಾರ್ಲಸ ಡಿಕೆನ್ಸನ ಪುಸ್ತಕಗಳನ್ನು ಅವನು ಸೆರೆಮನೆಯಲ್ಲಿದ್ದಾಗ ಓದಲಾರಂಭಿಸಿದನು. "ಬಾಸ್ಟನ್" "ಜಂಗಲ್", "ಆಯಿಲ್"; ಅಪ್ಟನ್ ಸಿಂಕ್ಲೇಯರರ "ನ್ಯಾಯಕ್ಕಾಗಿ ಕೂಗು" ( Cry for Justice ) ಮೊದಲಾದ ಪುಸ್ತಕಗಳನ್ನು ಅವನು ಓದಿದ್ದನು. ಹಾಲ್ ಕೇವನ "ಅಮರ ನಗರ" ( Eternal City ) ದೊಳಗಿನ ರೋಮಿಲಿಯ ಭಾಷಣದೊಳಗಿನ ಅನೇಕ ಭಾಗಗಳನ್ನು ಅವನು ಕಂಠಗತ ಮಾಡಿದ್ದನು. ರೀಚನ "ಜಗತ್ತಿಗೆ ಧಕ್ಕೆ ಕೊಟ್ಟ ಹತ್ತು ದಿನಗಳು", ರಾಪಸ್ಕಿನ್ನನ "ಎಂದೂ ಸಂಭವಿಸದಿದ್ದ ಘಟನೆ" (What never happened), ಮಾಕ್ಸಿಮ್ ಗಾರ್ಕಿಯ "ತಾಯಿ", ಸ್ಟೆಪ್ ನಾಯಿಕನ "ಶೂನ್ಯವಾದಿಯ ಜೀವನ", ಯಾವನು "ರಶಿಯನ್ ಪ್ರಜಾಪ್ರಭುತ್ವದ ಉದಯ"ವು ರಶಿಯಾದ ಆರಂಭದ ಕ್ರಾಂತಿಯ ಇತಿಹಾಸದಮೇಲಿನ ಅತ್ಯಂತ ಉಪಯುಕ್ತ ಪುಸ್ತಕವೆಂದು ಅವನು ತಿಳಿದಿದ್ದನೋ ಆ ಜಟ್ಕ್ಯಾರ ವಾಯಿಲ್ಡನ "ಶೂನ್ಯವಾದಿಗಳು" ಇವೇ ಮೊದಲಾದ ಪುಸ್ತಕಗಳು ಅವನ ಪ್ರೀತಿಯವಾಗಿದ್ದವು.

ಕಮ್ಯುನಿಸ್ಟ್ ಸಾಹಿತ್ಯವನ್ನು ಓದಲಾರಂಭಿಸಿದಾಗಿನಿಂದ ಭಗತ್ ಸಿಂಗನು ಕಮ್ಯುನಿಷ್ಟ ತತ್ವಗಳನ್ನನುಸರಿಸಿ ತನ್ನ ಜೀವನವನ್ನು ಸಾಗಿಸುವ ಯತ್ನವನ್ನು ಮಾಡಿದನು. ಕ್ರೆಪೋಟ್ಕಿನ್ನನ "ಸ್ಮೃತಿಗಳು" ಎಂಬ ಪುಸ್ತಕವು ಅವನ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ಆದರೆ ನಿಜವಾಗಿಯೂ ಅವನ ಜೀವನದಲ್ಲಿ ಬದಲಾವಣೆಯನ್ನು ಮಾಡಿದವನೆಂದರೆ ಮಾಯಕೆಲ್ ಬೇಕಿನ್. ದೇವರ ವಿಷಯದ ಎಲ್ಲ ಕಲ್ಪನೆಗಳು ಕಮ್ಯುನಿಸ್ಟ ತತ್ವಜ್ಞಾನಕ್ಕೆ ವಿರೋಧಿಯಾದುದರಿಂದ ಅವನು ತನ್ನ ಮನಸ್ಸಿನಲ್ಲಿ ದೇವರ ಅಸ್ತಿತ್ವದ ಬಗ್ಗೆ ಇದ್ದ ಯಾವ ನಂಬಿಗೆಯೂ ಉಳಿಯದಂತೆ ಯತ್ನಿಸಿದನು. ತಾನು ನಿರೀಶ್ವರವಾದಿಯೆಂದು ಅವನು ಬಾಹ್ಯಾತ್ಕಾರಿಯಾಗಿ ಯಾವಾಗಲೂ ಹೇಳುತ್ತಿದ್ದನು. ಅಂತರಂಗದಲ್ಲಿಯೂ ಅವನು ನಿರೀಶ್ವರವಾದಿಯೇ ಆಗಿದ್ದನೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವಂತಿಲ್ಲ. ದೇವರ ಕಲ್ಪನೆಯನ್ನು ತನ್ನ ಮನಸ್ಸಿನೊಳಗಿಂದ

ಕಿತ್ತೊಗೆಯುವುದು ಒಂದೇ ವೇಳೆ ಅವನಿಗೆ ಸಾಧ್ಯವಿರಬಹುದು. ೧೯೨೬ರಲ್ಲಿ ದಸರೆಯ ಮೆರವಣಿಗೆಯ ಮೇಲೆ ಬಾಂಬ್ ಎಸೆದ ಸಂದರ್ಭದಲ್ಲಿ ಅವನನ್ನು ಹಿಡಿದು ಕೋಣೆಯಲ್ಲಿ ಬಂಧಿಸಿ ಬಗೆಬಗೆಯ ಕಷ್ಟಗಳನ್ನು ಕೊಟ್ಟಾಗ ನಿರೀಶ್ವರ ವಾದದಲ್ಲಿಯ ಅವನ ನಂಬಿಗೆಯ ಪರೀಕ್ಷೆಯೇ ಆಯಿತೆಂದು ಹೇಳಬಹುದು. ಮುಂದಿನ ಮೂರು ವರುಷಗಳಲ್ಲಿ ಅವನು ಮಾಡಿದ ಹೆಚ್ಚಿನ ಅಭ್ಯಾಸದಿಂದ ದೇವರು ಇಲ್ಲವೆಂಬ ಅವನ ವಿಚಾರವೇ ಮತ್ತಿಷ್ಟು ದೃಢವಾಯಿತು.

ಕಾಕೋರಿ ಒಳಸಂಚಿನವರಲ್ಲಿ ನಾಲ್ವರನ್ನು ಗಲ್ಲಿಗೇರಿಸಿದ್ದರ ಪ್ರತಿಕ್ರಿಯೆ ಯುಂಟಾದ ಸ್ವಲ್ಪ ಅವಧಿಯನ್ನು ಬಿಟ್ಟರೆ ಭಗತ್‌ಸಿಂಗನು ಎಂದಿಗೂ ದಹಶತ ವಾದಿ (Terrorist) ಯಾಗಿರಲಿಲ್ಲ. ಬಹುಜನ ಸಮಾಜದ ಆಂದೋಲನ ದಲ್ಲಿಯೇ, ಬಹುಜನ ಸಮಾಜವು ಬಹುಜನ ಸಮಾಜಕ್ಕಾಗಿ ಪ್ರತ್ಯಕ್ಷ ಕೃತಿ ಯನ್ನು ಮಾಡಬೇಕೆಂಬುದರಲ್ಲಿಯೇ, ಅವನ ಸಂಪೂರ್ಣ ವಿಶ್ವಾಸವಿತ್ತು. ಜಮೀನದಾರ, ಭಾಂಡವಲದಾರ, ಮತ್ತು ಸಿರಿವಂತ ವಕೀಲರಿಂದ ತುಂಬಿದ ಕಾಂಗ್ರೆಸ್ಸು ಜನತೆಗೆ ಸಂಪೂರ್ಣ ಆರ್ಥಿಕ ಸ್ವಾತಂತ್ರ್ಯವನ್ನು ಒದಗಿಸಿಕೊಡಬಲ್ಲ ಸಂಗ್ರಾಮವನ್ನು ಎಂದಿಗೂ ಹೂಡಲಾರದೆಂಬುದು ಅವನ ಶ್ರದ್ಧೆಯಾಗಿತ್ತು. " ಗಾಂಧೀಜಿಯು ಮೃದು ಹೃದಯದ ಭೂತದಯಾವಾದಿಗಳಾಗಿದ್ದಾರೆ. ಆದರೆ ಭೂತದಯೆಯ ಆವಶ್ಯಕತೆಯಿರದೆ ಶಾಸ್ತ್ರೀಯ ಸಾಮಾಜಿಕ ಗತಿಮಾನ್ ಶಕ್ತಿಯ ಆವಶ್ಯಕತೆಯಿದೆ. " ಎಂದು ಅವನು ಆಗಾಗ್ಗೆ ಅನ್ನುತ್ತಿದ್ದನು. ಆ ಸಾಮಾಜಿಕ ಕ್ರಾಂತಿಗಾಗಿ ದುಡಿಯುವ ಮತ್ತು ಜನತೆಯನ್ನು ಸಂಘಟಿಸುವ ಸ್ವಾರ್ಥರಹಿತ ಯುವಕರ ಗುಂಪೊಂದು ಅತ್ಯವಶ್ಯವಾಗಿ ಬೇಕೆಂದು ಅವನ ಅಭಿಪ್ರಾಯವಾಗಿತ್ತು.

ಈ ಕರ್ತವ್ಯದ ಬಗ್ಗೆ ಯುವಕರಲ್ಲಿ ತತ್ವ ನಿಷ್ಠೆಯನ್ನು ನಿರ್ಮಿಸುವ ಸಾಮ ರ್ಥ್ಯವು ಗಲ್ಲಿನ ಅಟ್ಟದ ಮೇಲಿಂದ ಮಾಡಿದ ಅರಿಕೆಗೇನೇ ಇದೆಯೆಂದು ಅವನು ಪೂರ್ಣವಾಗಿ ನಂಬಿದ್ದನು. ಮತ್ತು ಈ ಬಗೆಯ ಅರಿಕೆಯನ್ನು ಮಾಡಿಕೊಡುವ ಕೆಲಸವನ್ನು ತಾನೇ ಕೈಕೊಂಡನು. ಅಸೆಂಬ್ಲಿ ಬಾಂಬ ಕೇಸಿನಲ್ಲಿಯ ಆತನ ನಿವೇದನೆಯು ಕೇವಲ ಈ ಅರಿಕೆಯೇ ಆಗಿದೆ ಮತ್ತು ಅದು ಸಾವಿರಾರು ತರುಣ ತರುಣಿಯರ ಅಂತಃಕರಣಗಳನ್ನು ನೇರವಾಗಿ ಪ್ರವೇಶಿಸಿತು.

ಸೆರೆಮನೆಯಲ್ಲಿದ್ದಾಗ ಮತ್ತು ಆ ಭಯಂಕರ ಕೋಣೆಯಲ್ಲಿದ್ದಾಗ ಭಗತ್‌ಸಿಂಗನು ಓದುವುದರಲ್ಲಿಯೂ ಬರೆಯುವುದರಲ್ಲಿಯೂ ತನ್ನ ವೇಳೆಯನ್ನು ಕಳೆಯುತ್ತಿದ್ದನು. ಗಲ್ಲಿಗೇರಿ ತಮ್ಮ ಪ್ರಾಣಗಳನ್ನು ಕೊಟ್ಟವರ ಪಂಚಾಂಗ ವೊಂದನ್ನು ಅವನು ತಯಾರಿಸಿದನು ಮತ್ತು ಅವರೆಲ್ಲರ ಚರಿತ್ರೆಗಳನ್ನು ಸಂಕ್ಷೇಪವಾಗಿ ಕೊಟ್ಟು ಅವರವರಿಗೆ ಯೋಗ್ಯವಾದ ಆದರ್ಶ ವಾಕ್ಯಗಳನ್ನು ಬರೆದನು. ಆದರ್ಶವಾಕ್ಯಗಳನ್ನು ಅವನು ತನ್ನ ಸ್ಮರಣೆಯೊಳಗಿಂದ ಬರೆದಿದ್ದನು. ಅವು ಅವನು ಎಷ್ಟು ಓದಿದ್ದನೆಂಬುದರ ನಿದರ್ಶಕವಾಗಿದ್ದವು. ಸಾಹಿತ್ಯದೊಳಗಿನ ಉದಾತ್ತ ಮತ್ತು ಸ್ಫೂರ್ತಿದಾಯಕ ಭಾಗಗಳನ್ನು ಸ್ಮರಣದಲ್ಲಿಟ್ಟುಕೊಳ್ಳುವ ಅವನ ಪದ್ಧತಿಯನ್ನು ಅವು ವ್ಯಕ್ತಗೊಳಿಸುತ್ತವೆ. ಹತ್ತಿ ಮುದ್ರಿಸಿದರೆ ಸಂಪೂರ್ಣ ೪ ಪುಟಗಳು ತುಂಬುವಷ್ಟು ವಿಷಯುಗಳಿದ್ದ ಅವನ "ರೆವ್ಹಲ್ಯೂಶನರಿ" ( Revolutionary ) ಪತ್ರಕದ ಮೊದಲನೆಂಯ ಅಂಕವು—ಹಿಂದುಸ್ಥಾನ ರಿಪಬ್ಲಿಕನ್ ಅಸೋಶಿಯೇಶನ್‌ದವರು ಪ್ರಸಿದ್ಧಿಸಿದ ಮತ್ತು ೧೯೨೫ ರಲ್ಲಿ ಇಡೀ ಹಿಂದುಸ್ಥಾನದಲ್ಲಿಯೂ ಬ್ರಹ್ಮದೇಶದಲ್ಲಿಯೂ ಹಂಚಲಾದ ಅಂಕವು—ಅವನಿಗೆ ಸಂಪೂರ್ಣವಾಗಿ ಮುಖೋದ್ಗತವಾಗಿತ್ತು.

ಅವನು ಸೆರೆಮನೆಯಲ್ಲಿದ್ದಾಗ ಬರೆದು ಮುಗಿಸಿದ ಮತ್ತೊಂದು ದೊಡ್ಡ ಮತ್ತು ಕಷ್ಟಸಾಧ್ಯವಾದ ಪುಸ್ತಕವೆಂದರೆ ಭಾರತದಲ್ಲಿಯ ಕ್ರಾಂತಿಕಾರಿಗಳ ಅಂದೋಲನದ ಸವಿಸ್ತರವಾದ ಇತಿಹಾಸ. ಸೆರೆಮನೆಯಲ್ಲಿಯೂ ಅವನು ಜಪ್ತವಾದ ಮತ್ತು ಅಪರೂಪವಾದ ಸಾಹಿತ್ಯವನ್ನು ಹೇಗೆ ಸಂಪಾದಿಸಿದನೆಂಬುದೊಂದು ಆತ್ಯಾಶ್ಚರ್ಯದ ಸಂಗತಿಯಾಗಿದೆ. ಅದೊಂದು ದೊಡ್ಡ ಹೊತ್ತಿಗೆಯಾಗಿದೆ. ಅದು ಪ್ರಸಿದ್ಧವಾದರೆ ಈ ವಿಷಯವನ್ನು ಅವನು ಎಷ್ಟು ಸೂಕ್ಷ್ಮವಾಗಿ ಅಭ್ಯಸಿಸಿದನೆಂಬುದು ಕಂಡುಬರುವುದು. ಈ ವಿಷಯದ ಅಭ್ಯಾಸವನ್ನು ಮಾಡುವುದಕ್ಕಾಗಿ ಅವನು ಬಂಗಾಲೀ ಭಾಷೆಯನ್ನು ಕಲಿತು ಕೊಂಡಿದ್ದನು. ಈ ಪುಸ್ತಕವನ್ನು ಬರೆಯುವಾಗ ಬಂಗಾಲಿಯೊಳಗಿನ ಕ್ರಾಂತಿಕಾರಕ ಸಾಹಿತ್ಯವನ್ನು ಅವನು ಪೂರ್ಣವಾಗಿ ಉಪಯೋಗಿಸಿಕೊಂಡನು.

ಅವನು ಕತ್ತಲೆ ಕೋಣೆಯಲ್ಲಿದ್ದಾಗ ಕೂಡ "ಯುವಕ ಸಂಘ" ದವರಿಗೆ ೧೯೨೯ ರ ಲಾಹೋರ ಅಧಿವೇಶನದ ಸಮಯಕ್ಕೆ ಒಂದು ಮಹತ್ವದ

ಸಂದೇಶವನ್ನು ಕಳಿಸಿಕೊಟ್ಟಿದ್ದನು. ಕ್ರಾಂತಿಕಾರಿ ಪತ್ರಿಕೆಗಳಿಗೆ ಲೇಖನಗಳನ್ನು ಕಳಿಸುವುದೂ ಅವನಿಗೆ ಸಾಧ್ಯವಾಯಿತು. ಇಂಥ ಪತ್ರಕಗಳಲ್ಲಿ ಅತ್ಯಂತ ಮಹತ್ವದ ಪತ್ರಕವೆಂದರೆ "ಬಾಂಬ್ ತತ್ವಜ್ಞಾನ" (Philosophy of Bomb) ತಾನು ಗಲ್ಲಿಗೇರಿಸಲ್ಪಡುವ ಪೂರ್ವದಲ್ಲಿ ಸ್ವಲ್ಪೇ ದಿನ ಮೊದಲು "ಯುವಕ ರಾಜಕೀಯ ಕಾರ್ಯಕರ್ತರು" ಗಳಿಗಾಗಿ ಅವನು ಒಂದು ಪತ್ರಕವನ್ನು ಬರೆದು ಕಳಿಸಿದನು. ಇದೇ ಅವನು ತನ್ನ ರಾಷ್ಟ್ರಕ್ಕೆ ಕೊಟ್ಟುಹೋದ ಕೊನೆಯ ಇಚ್ಛೆ ಮತ್ತು ಮೃತ್ಯುಪತ್ರವಾಗಿದೆ.

ಸಾಮ್ಯವಾದಿಯಾದ ಭಗತ್‌ಸಿಂಗನದು ನಿಜವಾದ ಅಂತರ್‌ರಾಷ್ಟ್ರೀಯ ದೃಷ್ಟಿಯಾಗಿತ್ತು. ಪ್ರಾಂತೀಯತೆಯ ಅಂಶವೂ ಅವನಲ್ಲಿರಲಿಲ್ಲವೆಂಬುದು ಎಲ್ಲ ಕ್ರಾಂತಿಕಾರಿಗಳಿಗೂ ಸಮಾನವಾದ ಸಂಗತಿಯೇ ಆಗಿದೆ. ಆದರೆ ಅವನು ಅದಕ್ಕೂ ಮುಂದೆ ಹೋಗಿ ಮಾನವತೆಯ ತನ್ನ ಭೂಮಿಕೆಯ ಹಿಂದೆ ರಾಷ್ಟ್ರೀಯತೆಯನ್ನು ಮರೆಮಾಡಿದ್ದನು. ಭೂಗೋಲ ಮತ್ತು ಭಾಷೆಗಳ ಬಂಧನಗಳನ್ನು ಕಡಿದೊಗೆದು ಸ್ವತಂತ್ರ ಮಾನವನಾಗಿದ್ದನು. ಭಾರತೀಯ ಕ್ರಾಂತಿಕಾರಿಗಳಿಗೆ ರಾಷ್ಟ್ರೀಯತೆಯೂ ದೇಶಾಭಿಮಾನವೂ ಅತ್ಯಂತ ಪ್ರಿಯ ಮತ್ತು ಶ್ರೇಷ್ಠ ಭಾವನೆಗಳಾಗಿವೆ. ಆದ್ದರಿಂದ ಭಗತ್‌ಸಿಂಗನು ರಾಷ್ಟ್ರೀಯತೆಯ ಕವಚವನ್ನೊಡೆದು ಹೊರಗೆ ಬಂದು ಅಂತರ್‌ರಾಷ್ಟ್ರೀಯ ನಿಲುಮೆಯನ್ನು ಸ್ವೀಕರಿಸಿದ್ದೇನೂ ಸಾಮಾನ್ಯ ಸಂಗತಿಯಲ್ಲ.

ಅವನನ್ನು ಬಂಧಿಸಿದ ಕ್ಷಣದಿಂದ ೨೩ ನೆಯ ಮಾರ್ಚ ಸಂಜೆಯ ಸಾಯಮ್ ಪ್ರಕಾಶದ ವರೆಗೆ ಭಗತ್‌ಸಿಂಗನು ತನ್ನ ಕೊನೆಯ ಮತ್ತು ಉಜ್ವಲ ಪ್ರವಾಸಕ್ಕಾಗಿ ಸೆರೆಮನೆಯ ಕೋಣೆಯೊಳಗಿಂದ ಹೊರಗೆ ಹೆಜ್ಜೆ ಇಡುವ ವರೆಗೆ ಅವನ ಮನಸ್ಸಿನಲ್ಲಿ ಕ್ಷುದ್ರ ವಿಚಾರವು ಮೂಡಿದಂಥ ಒಂದು ಕ್ಷಣವೂ ಅವನ ಜೀವನದಲ್ಲಿದ್ದಿಲ್ಲ. ದಯೆಯ ಅರ್ಜಿಯನ್ನು ಮಾಡಬೇಕೆಂದು ಅವನ ಆಪ್ತರೂ ಸರಕಾರೀ ಅಧಿಕಾರಿಗಳೂ ಬಹಳ ಒತ್ತಾಯಪಡಿಸಿದರೂ ಆ ಬಗೆಯ ಯಾವುದಾದರೊಂದು ಸಂಗತಿಯನ್ನು ಮಾಡಲು ಅವನು ಸ್ಪಷ್ಟವಾಗಿ ನಕಾರವನ್ನಿತ್ತನು. ಮಾತ್ರವಲ್ಲದೆ ಸ್ಥಾನಿಕ ಸರಕಾರಕ್ಕೆ ಬರೆದ ಒಂದು ಉಜ್ವಲ ಓಲೆಯಲ್ಲಿ "ದೇಶದ ಬಿಡುಗಡೆಗಾಗಿ ಹೋರಾಡುವ ತಾನೊಬ್ಬ ಕ್ರಾಂತಿಕಾರಿ ಸೈನಿಕ" ನೆಂದು ಸಾರಿ ಬಳಿಕ ಹೀಗೆ ಬರೆದಿದ್ದನು:

" ಭಾರತೀಯ ಜನತೆಯಲ್ಲಿಯೂ ತನ್ನಲ್ಲಿಯೂ ಒಪ್ಪಂದವಾಗಿದೆಯೆಂದು ಸರಕಾರವು ತಿಳಿಯುತ್ತಿದ್ದರೆ ಸ್ವಾತಂತ್ರ್ಯದ ಸೈನಿಕರನ್ನು ಬಂಧಮುಕ್ತ ಮಾಡು ವುದು ನ್ಯಾಯವಾಗಿದೆ. ಆದರೆ ಇನ್ನೂ ಯುದ್ಧವೇ ಸಾಗಿದೆಯೆಂದು ಅದು ತಿಳಿಯುತ್ತಿದ್ದರೆ ನಮ್ಮನ್ನು ಅವರು ಸುಲಭವಾಗಿಯೇ ಕೊಲ್ಲಬಹುದು." ತಮ್ಮನ್ನು ಗಲ್ಲಿಗೇರಿಸದೆ ಯುದ್ಧದೊಳಗಿನ ಸೈನಿಕರಿಗೊಪ್ಪುವಂತೆ ಗುಂಡಿಕ್ಕಿ ಕೊಲ್ಲಬೇಕೆಂಬುದೊಂದೇ ಅವನ ಬಿನ್ನಹವಾಗಿತ್ತು.

" ಜನತೆ " ಯಲ್ಲಿ ಬರೆದಂತೆ " ಭಗತ್‌ಸಿಂಗನು ಮತ್ತೊಬ್ಬ ಹುತಾತ್ಮ ನಲ್ಲ. ಸಾವಿರಾರು ಜನಗಳಿಗೆ ಅವನೇ ನಿಜವಾದ ಹುತಾತ್ಮನಾಗಿದ್ದಾನೆ. " ಈ ಬಹುಮಾನವೂ ಅವನ ಯೋಗ್ಯತೆಗೆ ತಕ್ಕುದಾಗಿದೆ. ಹೌತಾತ್ಮ್ಯವನ್ನು ಆನಂದದಿಂದ ಅಪ್ಪಿಕೊಳ್ಳುವವರು ಅತ್ಯಲ್ಪ ಜನರೇ. ವಾರಗಳ ಮೇಲೆ ವಾರ ಗಳು ಉರುಳುತ್ತಲಿವೆ, ತಿಂಗಳ ಮೇಲೆ ತಿಂಗಳುಗಳು ಕಳೆಯುತ್ತಲಿವೆ; ದುರ್ದೈ ವವು ಎಲ್ಲ ದಿಕ್ಕುಗಳಿಂದಲೂ ಸುತ್ತುಗಟ್ಟಿ ಬಂದು ತನ್ನ ಬಹುವಿಧ ಕ್ರೂರ ತನದ ಪ್ರದರ್ಶನವನ್ನು ಮಾಡುತ್ತಲಿದೆ. ಈ ಬಗೆಯ ಎರಡು ವರುಷಗಳ ದೀರ್ಘ ಅವಧಿಯ ವರೆಗೆ ತಮ್ಮ ಸತ್ವವನ್ನು ಉಜ್ವಲವಾಗಿಯೇ ಇಟ್ಟುಕೊಂಡ ವರು ಹುತಾತ್ಮರಲ್ಲಿಯೂ ಅಪರೂಪವಾಗಿ ಇದ್ದಾರೆ. ಯುವಕರಿಗೆ ಸ್ವಾಭಾ ವಿಕವಾದ ಕೇವಲ ಭಾವನೋತ್ಕಟತೆಯಾಗಲಿ, ಉತ್ಸಾಹಾತಿಶಯವಾಗಲಿ, ಇಲ್ಲವೆ ಒಂದು ಕ್ಷಣಿಕ ಧ್ಯೇಯೋನ್ಮಾದವಾಗಲಿ ಇಂಥ ಕಠಿಣ ಪರೀಕ್ಷೆಯೊಳ ಗಿಂದ ಯಾರನ್ನೂ ದಾಟಿಸಲಾರದು. ಭಗತ್‌ಸಿಂಗನು ತನ್ನ ವಿಚಾರಣೆಯನ್ನೇ ದುರ್ಲಕ್ಷಿಸಿದಂತೆ ಕಾಯದೇಶೀರ ಅಪೀಲನ್ನೂ ಶಿಕ್ಷೆಯನ್ನೂ ಮುಂದೂಡ ಬೇಕೆಂಬ ಅಂದೋಲನವನ್ನೂ ದುರ್ಲಕ್ಷಿಸಿದ್ದನು. ಹೀಗೆ ಮಾಡಬೇಕಾದರೆ ಹುತಾತ್ಮನ ಗುಣಗಳೂ ದೃಢಜೀವನ ತತ್ವಜ್ಞಾನವೂ ಬೇಕಾಗುತ್ತವೆ. ಇವೆ ರಡೂ ಭಗತ್‌ಸಿಂಗನಲ್ಲಿ ವಿಪುಲವಾಗಿದ್ದವು.

" ಆಧುನಿಕ ಇತಿಹಾಸದಲ್ಲಿ ಭಗತ್‌ಸಿಂಗನ ಜೀವನ-ಕಾದಂಬರಿಯಷ್ಟು ಬೇರೆ ಯಾವ ಸಂಗತಿಯೂ ಜನತೆಯ ಮನಸ್ಸನ್ನು ಆಕರ್ಷಿಸಿಕೊಳ್ಳಲಿಲ್ಲ. ಅವನ ಚರಿತ್ರೆಯು ಈಗಾಗಲೆ ದಂತಕಥೆಯಾಗಿ ಪರಿಣಮಿಸಿದೆ. ಮತ್ತು ಅವ ನಾದರೂ ಒಂದು ಅದ್ಭುತರಮ್ಯ ಕಾದಂಬರಿಯ ನಾಯಕನಾಗಿ ಬಿಟ್ಟಿದ್ದಾನೆ.

ಭಾರತೀಯ ಯುವಕರಿಗೆ ಅವನಲ್ಲಿ ನ್ಯಾಯವಾಗಿಯೆ ಅಭಿಮಾನವುಂಟಾಗಿದೆ. ಅವನ ಅದ್ವಿತೀಯ ಧೈರ್ಯ, ಉಜ್ವಲ ಧ್ಯೇಯನಿಷ್ಠೆ ಮತ್ತು ಎಂದಿಗೂ ಹಿಂಜರಿಯದಿರುವ ಸ್ವಭಾವ—ಇವು ಅತ್ತಿತ್ತ ಅಲೆದಾಡುತ್ತಿರುವ ಅನೇಕ ಆತ್ಮಗಳಿಗೆ ಮಾರ್ಗದರ್ಶನ ಮಾಡಲು ನಿಂತ ದೀಪಸ್ತಂಭವಾಗಿದೆ.

"ಎಲ್ಲೆಲ್ಲಿಯೂ ಶೈಥಿಲ್ಯವುಂಟಾದ ಸಮಯದಲ್ಲಿ ಭಗತ್‌ಸಿಂಗನ ನಿರ್ಭಯತೆಯೂ, ಅವನ ಸ್ವಾರ್ಥತ್ಯಾಗವೂ ರಾಜಕೀಯ ವಾತಾವರಣದಲ್ಲಿ ವಿದ್ಯುಚ್ಛಕ್ತಿಯನ್ನು ನಿರ್ಮಿಸಿದವು. 'ಕ್ರಾಂತಿಯು ಚಿರಾಯುವಾಗಲಿ!' ಎಂಬ ಘೋಷಣೆಯನ್ನು ಲೋಕಪ್ರಿಯವನ್ನಾಗಿ ಮಾಡಿದವನು ಅವನು. ಈ ಜಯಘೋಷವನ್ನು ಅವನು ಒಂದು ಬ್ರಿಟಿಷ್ ನ್ಯಾಯಾಲಯದಲ್ಲಿ ಮಾಡಿದನು. ಆದರೆ ಅದರ ನಿನಾದಗಳು ಈಗ ಭಾರತದ ಬೀದಿಬೀದಿಗಳಲ್ಲಿಯೂ ಕೇಳಬರುತ್ತಿವೆ. ಭಗತ್‌ಸಿಂಗನು ಮರಣಹೊಂದಿದ್ದರೂ ಜನರು 'ಕ್ರಾಂತಿಯು ಚಿರಾಯುವಾಗಲಿ!' ಎಂಬ ಜಯಘೋಷವನ್ನು ಮಾಡಿದಾಗಲೆಲ್ಲ ಅಥವಾ ಕೇಳಿದಾಗಲೆಲ್ಲ 'ಭಗತ್‌ಸಿಂಗನು ಚಿರಂಜೀವಿಯಾಗಲಿ!' ಎಂಬ ಎರಡನೆಯ ಜಯಘೋಷವೂ ಅದರಲ್ಲಿ ಅಡಕವಾಗಿರುತ್ತದೆ."

ಜೈ ಭಾರತ



# APPENDIX.

Extracts from the written statement filed by Bhagat Singh and B. K. Dutt in the Court of Sessions Judge, Delhi, in the Assembly Bomb Case, on the 8th June, 1930.

" When we were told by some of the police officers who visited us in the jail, that Lord Irwin in his address to the joint session of the two houses after the event in Question, described it as an attack diverted against no individual but against a constitution itself, we readily recognised that the true significance of the incident had been correctly appreciated.

We are next to have in our love for humanity and so far from any malice against any individual, we hold human life sacred beyond words; we are neither perpetrators of dastardly outrages and therefore a disgrace to the country as the pseudo-socialist Divan Chamanlal is reported to have described us, nor are we lunatics as the 'Tribune' of Lahore and some others would have it believed.

" Our practical protest was against the institution which since its birth has eminently displayed not only its worthlessness, but its far reaching power for mischief. The more we have pondered, the more deeply we have been convinced that it exists only to demonstrate to the world the Indian humiliation and helplessness and it symbolises the overriding domination of an irresponsible and autocractic rule.

"………. in spite of earnest endeavour, we have utterly failed to find any justification for the existence of an institution which despite all pomp and splendour organised with the hard earned money of the sweating millions of India is only a hollow show and a mischievious make-believe,

"And alike have we failed to comprehend the mentality of public leaders who help to squander public time and money on so mainfestly a stage-managed exhibition of India's helpless subjection,

" None who has felt like us for the dumb driven drudges of labourers could possibly witness this spectacle with equanimity, name whose heart bleeds for those who have given their life-blood in silence to the building up of the economic structure of the exploiters of whom the Government happen to be the biggest in the country, could repress the call of the soul-agonising anguish which is so ruthlessly wrung out of our hearts, Consequently bearing in our minds the words of late Mr, S, R, Dass, once the Law Member of the Governor General's Executive Council, which appeared in the famous letter to his son to the effect that the bomb was necessary to awaken England from her dreams. We dropped bombs, on the floor of the Assembly Chamber to register our protest on behalf of those who had no other means left, to give expression to their heart-rendring agony, Our sole purpose was 'to make the deaf hear' and to give the heedless timely warning,

" Others have as keenly felt as we have done and from under the seeming illness of the sea of the Indian humanity

